THE

Kannada Sangita Drama.

# GUNASHODHANA

OR

## Virtue is Paramount.




COMPOSED BY

**Achyuta Krishna Rao Huilgol,**

(*The Author of Kannada Sambhajicharitra.*)



**GADAG. (Dist: Dharwar)**

Price 12 As.] 1915 [Postage extra.

ಕನ್ನಡ ಸಂಗೀತ

# ಗುಣಶೋಧನ ನಾಟಕವು

धर्मार्थकाममोक्षेषु वैचक्षण्यं कलासु च ।
करोति प्रीतिं कीर्तिं च साधुकाव्यनिषेवणम् ॥



ಗ್ರಂಥಕರ್ತಾ:—

ಅಚ್ಯುತ ಕೃಷ್ಣರಾವ ಹುಯಿಲಗೋಳ,

(ಕನ್ನಡ ಸಂಭಾಜೀ ಚರಿತ್ರೆಯ ಲೇಖಕರು)

ಗದಗ. (ಜಿ: ಧಾರವಾಡ.)

ಬೆಲೆ: ೧೨ ಆಣೆ.] 1915 [ಅಂಚೆವೆಚ್ಚ ಬೇರೆ.







ಶ್ರೀಃ

# ಅರ್ಪಣ ಪತ್ರಿಕೆ



To

The beneficent feet of the God

Tirupati

## Sri Laxmivenkatramana

THIS LITTLE WORK

IS

Most humbly and devotedly dedicated

*by the Author.*

ವಾರ್ಧಿಕ ಷಟ್ಪದಿ.

ಶ್ರೀರಮಣ ಜಗದಿ ಹೂಮಾಲೆ ಬಾಡುವುದೆಂದು ।
ಸಾರವಿಹನವರಸಗಳೆಂಬ ಕುಸುಮಗಳಿಂದ ।
ಹಾರವ ರಚಿಸುತಲದಕೆ ಗುಣಶೋಧನವೆಂಬ ನವನಾಮವನಿಡುತಲಿಂದು ।
ಅರ್ಪಿಸುವೆ ನಿನ್ನಯ ಚರಣಕತಿಭಕ್ತಿಯಿಂದ ।
ಭೂರಮಣ ದಯವಿಟ್ಟು ಸ್ವೀಕರಿಸಿ ಮನಕಂದ ।
ಬೀರಿ ಪೊರೆಗದಗಿನೊಳಿಹ ತವದಾಸ ಕೃಷ್ಣಾತ್ಮಜನಚ್ಯುತನ ಮುದದಿಂದ
॥ ೧ ॥



Achyut Krishnarao Huilgol, Gadag.

The Bombay Art Printing Works Fort.

# PREFACE.

"Things seen are mightier than things heard"

BY the grace of the Almighty and our beloved Sovereign, I am placing before the public, to-day my second production. I confess I should never have been able to do so, were it not for the gracious patronage so kindly extended to me by His Highness the Maharaja of Mysore, and the encouragement which the Karnatak Vidya Vardhak Sangha of Dharwar gave me by their kind appreciation of my first work, "Sambhaji Charitra".

The dramatic science has been described as the fifth Veda and held in the highest regard by poets like Kalidas. Such splendid science or art however has lately lost its force and vigour as men of talents and education, have seldom tried their pen in that direction. And further this art has suffered badly as the stage, invariably associated with it, has been in the hands of insignificant persons. Leaving aside the splendid drama "Shakuntala" by the late Mr. Sheshagirirao Churamuri, there have been very few dramas of any note in Canarese. Recently, our Maharatha

brethren have been striving hard for the advancement of their literature in general, and the drama has received no small share of attention from them. Some activity is also visible among our Kannada brethren on this side, and our learned friends Sriyuta Vasudevacharya Kerur of Bagalakota, and Sriyuta Krishnarao Mudavadekar of Dharwar, who have already done meritorious service to the Kannada literature, will, it is expected, put forth some excellent dramas. With my very humble attainments I have made this my humble attempt to write a drama, with the sole desire of serving Kannada literature to the best of my poor abilities. I had first intended to render a good Marathi drama into Canarese, but on the suggestion of my friend the late Mr. N. B. Devale, I made bold to write an original drama. To him, I feel greatly indebted for his suggestion, though to my misfortune, he is not present to-day to witness its completion.

The heroine of this drama is Princess Kamala the daughter of King Chandrasekhar of Champakanagar. The episode of her marriage with Hansaraj against the wish of her father who insisted upon her marrying Kumatiraj, is the theme of the drama. Hansaraj, a scion of the noble

Rajaput dynasty of Hastinapur, is, as conspicuous by his noble qualities, as Kumatiraj is by his foppery and stupidity. Kamala's father preferred Kumatiraj to Hansaraj as the former possessed immense riches, as also there was a deadly enmity between Hastinapur and Champakanagar dynasties. Kamala's refusal to marry Kumati evidently brought down upon her the King's wrath and her calm endurance of her father's harsh treatment, her devotion and loyalty to her father in spite of his cruelty, her unswerving attachment to the virtuous Hansaraj the lord of her heart, similarly but independently and more transcendentally her dear and noble lord's manifold virtues, bravery, chivalry, and the utmost solicitude for the welfare of his subjects, are fully brought out in this play. The moral of the drama as manifested by the conduct of the hero and heroine is that virtue reigns supreme.

I have tried to make the composition of the drama as easy as possible, so that it may be easily understood not only by the educated, but by others also-by women and children alike. I have tried to follow the precepts of Bharat Muni the Master of Dramaturjy, particularly his golden precept of avoiding slang and vulgar expressions,

so that the book may be used even in schools. The success, of course, of this book depends entirely upon the appreciation of this my aim and object by the public.

This being my first attempt I am sure the public will unreservedly show me every indulgence. I am greatly indebted to Mr. M. A. Ramanuja Iyengar, Kannada Pandit of the Mysore Darbar and Editor of the Karnatak Kavya Kalanidhi and Mr. Srinivas G. Baichawal, B.A., (Honours, Bombay) for their manifold suggestions and kind help. I am also indebted to Mr. Venkobarao Hulageri, Manager of Shirahatti Mahalaxmi Prasadic Dramatic Company, for certain suggestions in scenery, which, will be found of great value, if the drama is brought on stage.

GADAG,
*28th August 1915.*

*Auhtor.*

॥ श्रीराम ॥

# ಪ್ರಸ್ತಾವನೆಯು.

ಸೃಷ್ಟಿಸ್ಥಿತಿಲಯಗಳಿಗೆ ಕಾರಣನೂ, ವೇದಾಂತವೇದ್ಯನೂ, ಆದಿಮಧ್ಯಾಂತ ರಹಿತನೂ ಆದ ಶ್ರೀಲಕ್ಷ್ಮೀವೇಂಕಟೇಶನ ಪ್ರೇಮಯುಕ್ತವಾದ ಆಶೀರ್ವಾದಗಳಿಂದಲೂ, ಪ್ರಜೆಗಳ ಕಲ್ಯಾಣಮಾಡುವುದರಲ್ಲಿ ದಕ್ಷರಾದ ಪಂಚಮ ಜಾರ್ಜ ಭೂಪತಿಗಳವರ ಕೃಪಾಕಟಾಕ್ಷದಿಂದಲೂ, ಕರ್ನಾಟಕ ಭಾಷಾ ಭೂಷಣರೂ, ದಾನಶೂರರೂ ಆದ ಶ್ರೀಮತ್ ಕೃಷ್ಣರಾಜ ಒಡೆಯರ ಬಹಾದ್ದೂರ, ಜಿ. ಸಿ. ಎಸ್. ಆಯ್., ಇವರ ಉದಾರಾಶ್ರಯದಿಂದಲೂ, ಕರ್ನಾಟಕ ವಿದ್ಯಾವರ್ಧಕಸಂಘ, ಧಾರವಾಡ ಇವರ ಕಾಣಿಕೆ ರೂಪವಾದ ಪ್ರೋತ್ಸಾಹನದಿಂದಲೂ, ನನ್ನ ಮೊದಲಿನ ಗ್ರಂಥವಾದ ಸಂಭಾಜಿ ಚರಿತ್ರೆಗೆ ವಿಶೇಷ ಸಹಾನುಭೂತಿಯು ದೊರೆತದ್ದರಿಂದ, ಈ ನನ್ನ "ಗುಣಶೋಧನ"ವೆಂಬ ಸ್ವತಂತ್ರ ನಾಟಕವು ಕನ್ನಡಿಗರ ದೃಷ್ಟಿಗೆ ಬಿತ್ತು, ಎಂದು ಹೇಳಿದರೆ ಅತಿಶಯೋಕ್ತಿಯಾಗದು. ನಾಟಕವು ಪಂಚಮವೇದವೆನಿಸುತ್ತಿದ್ದು, ಕವಿಕುಲ ಗುರು ಕಾಲಿದಾಸನು **"नाट्यं भिन्नरुचेर्जनस्य बहुधाप्येकं समाराधनं"** ಎಂದು ನಾಟ್ಯಕಲೆಯ ಮಹಿಮೆಯನ್ನು ವರ್ಣಿಸಿರುತ್ತಾನೆ. ಈ ತರದ ವರ್ಣನೆಗೆ ಪಾತ್ರವಾದ ನಾಟ್ಯಕಲೆಯೆಂಬ ರತ್ನವು ಜಾಣರೂ, ನೀತಿವಂತರೂ ಆದವರ ವಶವಾಗದೆ ವಿಷಯಾಧೀನರೂ, ಅವಿಚಾರಿಗಳೂ ಆದವರ ವಶದಲ್ಲಿ ಸಿಕ್ಕು ತನ್ನ ಕಾಂತೆಯನ್ನು ಕಳೆದುಕೊಂಡಿದೆ. ಆದರೂ ಇತ್ತಿತ್ತಲಾಗಿ ವಿದ್ವಜ್ಜನರ ದೃಷ್ಟಿಯು ಈ ಕಲೆಯು ಕಡೆಗೆ ಬೀಳಹತ್ತಿದ್ದರಿಂದ ನಿರಾಶೆಯಲ್ಲಿಯೇ ಆಶಾಂಕುರವು ಮೊಳೆದೋರಿತೆಂದು ತಿಳಿಯುತ್ತೇನೆ. ಕನ್ನಡ ಭಾಷೆಯಲ್ಲಿ ವೈಕುಂಠವಾಸಿ, ರಾ। ರಾ। ಶೇಷಗಿರಿರಾವ, ಚುರಮುರಿಕೃತ ರಸಪೂರಿತವಾದ "ಶಾಕುಂತಲ" ನಾಟಕವನ್ನುಳಿದು ಮತ್ತಾವ ನಾಟಕಗಳೂ ಇಲ್ಲ. ಇದ್ದರೂ ಬಹು ಸ್ವಲ್ಪ ಪ್ರಮಾಣದಲ್ಲಿವೆ. ಇತ್ತಿತ್ತಲಾಗಿ ನಮ್ಮ ಪ್ರಿಯಬಂಧುಗಳಾದ ಮಹಾರಾಷ್ಟ್ರ

ದವರು ನಾಟ್ಯಕಲೆಯಲ್ಲಿ ಮುಂದರಿಯುವುದನ್ನು ನೋಡಿಯೇ ನಮ್ಮಲ್ಲಿಯ ವಿದ್ವಜ್ಜನರ ಪ್ರೀತಿಗೆ ಪಾತ್ರರಾದ ಮ|ರಾ|ರಾ| ಕೃಷ್ಣರಾವ ಮುದವಡೇಕರ, ವೇ|ರಾ|ರಾ| ವಾಸುದೇವಾಚಾರ್ಯ ಕೆರೂರ, ಮತ್ತು ಇತರ ಸಭ್ಯಗೃಹಸ್ಥರು ಹೊಸ ಹೊಸ ನಾಟಕಗಳನ್ನು ರಚಿಸತೊಡಗಿದ್ದಾರೆ. ಜಗನ್ನಿಯಾಮಕನು ಇವರ ಕಾರ್ಯಕ್ಕೆ ಉತ್ತೇಜನವನ್ನು ಕೊಡಲಿ! ನಾನು ಅಲ್ಪಮತಿಯಾಗಿದ್ದರೂ, ನಾಟ್ಯದೇವತೆಯ ಸೇವೆಯನ್ನು ಮಾಡುವ ಉತ್ಕಟ ಇಚ್ಛೆಯಿಂದಲೇ ಗುಣಶೋಧನವೆಂಬ ಸ್ವತಂತ್ರ ನಾಟಕವನ್ನು ರಚಿಸಿರುತ್ತೇನೆ. ನನ್ನ ಮನಸ್ಸು ಮರಾಠೀ ಭಾಷೆಯಲ್ಲಿರುವ ಒಂದು ಉತ್ತಮವಾದ ನಾಟಕದ ಕನ್ನಡ ಭಾಷಾಂತರವನ್ನು ಮಾಡಬೇಕೆಂದು ಹಾತೊರಿಯುತ್ತಿತ್ತು. ಆದರೆ ನನ್ನ ಪರಮ ಮಿತ್ರ ಸ್ವರ್ಗವಾಸಿ ಮಿ|ರಾ|ರಾ| ನಾರಾಯಣಾಚಾರ್ಯ ಭಾವೂ ಆಚಾರ್ಯ ದೇವಳೆ, ಇವರು ಕನ್ನಡದಲ್ಲಿ ಅನ್ಯಭಾಷೆಯಿಂದ ವಿಸಂಗತವಾಗಿಯೂ, ಗಡಚಾಗಿಯೂ ರಚಿಸಿದ ನಾಟಕಗಳಲ್ಲದೆ ಸ್ವತಂತ್ರ ನಾಟಕಗಳೇ ಇಲ್ಲವೆಂದು ಮತಪಟ್ಟದ್ದರಿಂದ ನಾನು ನನ್ನ ಅಲ್ಪಮತಿಗೆ ತಿಳಿದಷ್ಟರ ಮಟ್ಟಿಗೆ, ಮತ್ತು ಈ ಕೊರತೆಯನ್ನು ಆದಷ್ಟು ದೂರ ಮಾಡಬೇಕೆಂದು ಮೆ| ಟಾಡ್ ಸಾಹೇಬರವರು ರಚಿಸಿದ ಇತಿಹಾಸಗಳಲ್ಲಿಯ ಕಥೆಗಳ ಆಧಾರದ ಮೇಲಿಂದ ಹೊಸ ಕಥೆಯ ರಚಿಸಿ, ಈ ನಾಟಕವನ್ನು ಬರೆದಿರುತ್ತೇನೆ. ಸ್ವರ್ಗವಾಸಿ ದೇವಳೆ, ಇವರು ನನ್ನ ನಾಟಕವು ಪೂರ್ಣವಾದದ್ದನ್ನು ನನ್ನ ದುರ್ದೈವದ ಮೂಲಕ ನೋಡಲಿಕ್ಕೆ ಇಲ್ಲದಿದ್ದರೂ ನಾನು ಅವರಿಗೆ ಬಹು ಋಣಿಯಾಗಿರುತ್ತೇನೆ. ವಿಶ್ವಸಾಕ್ಷಿಯಾದ ಪರಮೇಶ್ವರನು ಅವರ ಆತ್ಮಕ್ಕೆ ಶಾಂತತೆಯನ್ನೀಯಲಿ!

ಈ ನಾಟಕದ ನಾಯಿಕೆ ಎಂದರೆ, ಚಂಪಕನಗರದ ರಾಜನಾದ ಚಂದ್ರಶೇಖರನ ಮಗಳು ಕಮಲಾದೇವಿಯು ಒಳ್ಳೇ ಶ್ರೀಮಂತನಾದ ಕುಮತಿ ರಾಜನನ್ನು ತನ್ನ ತಂದೆಯ ಉಪದೇಶದ ಮೇರೆಗೆ ಲಗ್ನವಾಗದೆ, ಆತನು ಕೊಟ್ಟ ಬಹು ಕಡುತರವಾದ ಶಿಕ್ಷೆಯನ್ನು ತಾಳ್ಮೆಯಿಂದ ಅನುಭವಿಸುತ್ತ, ಕಟ್ಟಕಡೆಗೆ ತನ್ನ ಮಾನಸಹಂಸನೂ, ಗುಣನಿಧಿಯೂ ಆದ ಹಂಸರಾಜನ ಸಹಾಯದಿಂದ ಬಂಧಮುಕ್ತಳಾಗಿ, ತನ್ನ ತಂದೆಯ ವಲಿಸಿ, ಆತನ ಅನು

ಮತಿಯಿಂದಲೇ ಹಂಸರಾಜನೊಡನೆ ಲಗ್ನವಾದ ಸಂಗತಿಯನ್ನು ಈ ನಾಟಕದಲ್ಲಿ ವರ್ಣಿಸಿಯದೆ. ಗುಣನಿಧಿಯಾದ ಹಂಸರಾಜನ ಸ್ತ್ರೀಯರ ಹಾಗೂ, ಪ್ರಜೆಗಳ ವಿಷಯವಾದ ಉದಾತ್ತವಿಚಾರಗಳೂ, ರಾಜನಿಷ್ಠೆಯಾದ ಕಮಲಾದೇವಿಯ ಪತಿಭಕ್ತಿಯೂ, ಪಿತೃಭಕ್ತಿಯೂ, ಅವಿವೇಕಿಯಾದ ಕುಮತಿರಾಜನ ಸ್ತ್ರೀವಿಷಯವಾದ ಅಶ್ಲಾಘ್ಯವಿಚಾರಗಳೂ, ಕಥಾನಕ ಸಂಬಂಧದಿಂದ ಧ್ಯಾನದಲ್ಲಿಡತಕ್ಕಂಥಾದ್ದಾಗಿವೆ. ಈ ಆನಂದ ಪರ್ಯವಸಾಯಿ ನಾಟಕದಲ್ಲಿಯ ನಾಯಿಕಾ–ನಾಯಕರ ವರ್ತನವು ಜಗತ್ತಿನಲ್ಲಿ ರಾಜನಿಷ್ಠೆಯೂ, ಗುಣವೂ ಹೆಚ್ಚಿನವೆಂದು ಪ್ರೇಕ್ಷಕರ ಮನಸ್ಸಿನ ಮೇಲೆ ಬಿಂಬಿಸಿ, ಅವರನ್ನು ಸನ್ಮಾರ್ಗಕ್ಕೆ ಹಚ್ಚುವುದೆಂದು ಪೂರ್ಣ ನಂಬಿದ್ದೇನೆ.

ನಾಟಕವು ಆಬಾಲವೃದ್ಧರಿಗೂ, ವಿದ್ವಾಂಸರಿಗೂ, ಅಜ್ಞರಿಗೂ ತಿಳಿಯತಕ್ಕ ವಿಷಯವಾದ್ದರಿಂದ ನಾನು ಇದರಲ್ಲಿಯ ಗದ್ಯಪದ್ಯಗಳಲ್ಲಿ ಗಡಚಾಗಿರುವ ಶಬ್ದಗಳನ್ನು ಉಪಯೋಗಿಸದೆ, ಸೌಮ್ಯಶಬ್ದಗಳನ್ನೇ ಉಪಯೋಗಿಸಿರುತ್ತೇನೆ. ಈ ನಾಟಕವನ್ನು ಪ್ರತ್ಯಕ್ಷ ನೋಡುವುದರಿಂದ, ಇಲ್ಲವೆ ಓದುವುದರಿಂದ ಎಲ್ಲರ ಮನಸ್ಸು ಸನ್ಮಾರ್ಗದ ಕಡೆಗೆ ಒಲಿಯಿತೆಂದರೆ ನನ್ನ ಯತ್ನವು ಸಫಲವಾದಂತಾಯಿತು. ಈ ನಾಟಕವು ಶಾಲಾಖಾತೆಗೆ ಸಹ ಉಪಯೋಗವಾಗಬೇಕೆಂದೂ, ವಿದ್ಯಾರ್ಥಿಗಳ ಮೇಲೆ ನೀತಿಯ ಪರಿಣಾಮವಾಗಬೇಕೆಂದೂ, ನಾನು ಇದರಲ್ಲಿ ನಾಟ್ಯಾಚಾರ್ಯರಾದ ಭರತಮುನಿಯ ಅಭಿಪ್ರಾಯಕ್ಕನುಸಾರವಾಗಿ ನೀತಿಗೆ ವಿರುದ್ಧವಾದ ಮತ್ತು ಗ್ರಾಮ್ಯನುಡಿಗಳನ್ನೂ, ಶೃಂಗಾರರಸದ ವರ್ಣನೆಯನ್ನು ಬೀಭತ್ಸವಾಗಿ ರಚಿಸಿರುವುದಿಲ್ಲ. ಈ ನಾಟಕವನ್ನು ಮುಂದಕ್ಕೆ ತರುವುದೂ, ನನ್ನ ಇಚ್ಛೆಯನ್ನು ಪೂರ್ಣಮಾಡುವುದೂ, ಕನ್ನಡ ಭಾಷೆಯ ಅಭಿಮಾನಿಗಳಾದ ನನ್ನ ಬಂಧುಭಗಿನಿಯರನ್ನೇ ಕೂಡಿರುತ್ತದೆ.

ಇದು ನನ್ನ ಮೊದಲನೆಯ ನಾಟಕವಿದ್ದದ್ದರಿಂದ ನನ್ನ ಪ್ರಿಯ ಬಂಧುಭಗಿನಿಯರೆಲ್ಲರು ಹಂಸಕ್ಷೀರನ್ಯಾಯದಿಂದ ಗುಣಗ್ರಹಣಮಾಡಿ, ಕ್ಷಮಾಪೂರ್ವಕಬುದ್ಧಿಯಿಂದ ತಪ್ಪುಗಳನ್ನು ತಿಳಿಸಬೇಕೆಂದು ನಾನು ವಿಶೇಷವಾಗಿ ಪ್ರಾರ್ಥಿಸುತ್ತೇನೆ. ಈ ನಾಟಕವನ್ನು ಬರೆಯುವಾಗ ಮೈಸೂರ ಆಸ್ಥಾನ ಪಂಡಿತರೂ, ಕರ್ನಾಟಕ ಕಾವ್ಯಕಲಾನಿಧಿಯ ಚಾಲಕರೂ, ಆದ ಎಮ್. ಎ.

ರಾಮಾನುಜ ಐಯಂಗಾರ, ಹಾಗೂ ಉತ್ತಮ ಪದಗಳ ಧಾಟಿಯನ್ನು ಕೊಟ್ಟ ಮಿ। ರಾ। ರಾ। ಶ್ರೀನಿವಾಸ, ಜಿ. ಬೈಚವಾಳ, ಬಿ. ಎ. ಇವರ ವ ಇತರ ಆಪ್ತೇಷ್ಟರ ಅನೇಕ ಸೂಚನೆಗಳಿಂದ ನಾನು ಉಪಕೃತನಾಗಿರುತ್ತೇನೆ. ಇವರೆಲ್ಲರ ಉಪಕಾರವು ನನ್ನ ಮೇಲೆ ಬಹಳಾಗಿದೆ.

ಕೊನೆಯಲ್ಲಿ ನಾಟಕದಲ್ಲಿಯ ಸೀನರಿಗಳ ಸುಧಾರಣೆಯನ್ನು ಮಾಡಿ, ಅವುಗಳಲ್ಲಿ ಹೆಚ್ಚು ಕಡಿಮೆ ಮಾಡಲು ನನಗೆ ವಿಶೇಷ ಸಹಾಯಮಾಡಿದ ನನ್ನ ಮಿತ್ರ ಮ।ರಾ।ರಾ। ವೆಂಕೋಬರಾವ ಹಣಮಂತರಾವ ಹುಲಗೇರಿಕರ, ಶಿರಹಟ್ಟಿ ಮಹಾಲಕ್ಷ್ಮೀ ಪ್ರಾಸಾದಿಕ ನಾಟಕ ಕಂಪನಿಯ ಮಾಲಕರ ಮತ್ತು ಈ ನಾಟಕವನ್ನು ವಿಶೇಷ ಶ್ರಮತೆಗೆದುಕೊಂಡು ಚೆನ್ನಾಗಿ ಛಾಪಿಸಿದ ವೇ। ರಾ। ರಾ। ಉದ್ಯಾವರ ನಾರಾಯಣಾಚಾರ್ಯರ ಉಪಕಾರ ಸ್ಮರಿಸಿ, ಈ ಪ್ರಸ್ತಾವನೆಯನ್ನು ಮುಗಿಸುತ್ತೇನೆ.

ಇತಿ ತಮ್ಮ ವಿಧೇಯ,

**ಗ್ರಂಥಕರ್ತಾ.**



# ನಾಟಕದಲ್ಲಿಯ ಪಾತ್ರಗಳು

| | |
|---|---|
| 1 ಹಂಸರಾಜ | ಹಸ್ತಿನಾವತಿಯ ರಾಜನು ಈ ನಾಟಕದ ನಾಯಕನು. |
| 2 ವೀರಸೇನ | ಹಂಸರಾಜನ ಗೆಳೆಯನು. |
| 3 ವಿಜಯನು | ವೀರಸೇನನ ತಮ್ಮನು. (ಬಾಲಕನು) |
| 4 ಸುಶೀಲಾದೇವಿ | ಹಂಸರಾಜನ ತಾಯಿಯು. |
| 6 ಇಬ್ಬರು ದಾಸಿಯರು | |
| 7 ಕಮಲಾದೇವಿ | ಚಂಪಕನಗರದ ರಾಜನಾದ ಚಂದ್ರಶೇಖರನ ಮಗಳು ಈ ನಾಟಕದ ನಾಯಿಕೆಯು. |
| 8 ಚಿತ್ರರೇಖೆ<br>9 ಕೋಕಿಲೆ | ಕಮಲಾದೇವಿಯ ಸಖಿಯರು. |
| 10 ಮಂಜುಘೋಷಾ | ಕಮಲಾದೇವಿಯ ದಾಸಿಯು. |
| 11 ಚಂದ್ರಶೇಖರರಾಜ | ನಾಯಿಕೆಯ ತಂದೆಯು. |
| 12 ಬಲಸಿಂಹ | ಚಂದ್ರಶೇಖರನ ಸೇನಾಧೀಶ. |
| 13 ಜಯಸಿಂಹ | " ದೂತ. |
| 16 ಮೂರು ಜನ ಸರದಾರರು | |
| 17 ಕುಮತಿರಾಜ | ಕುವಲಯಪುರದ ರಾಜನು, ಈ ನಾಟಕದ ಉಪನಾಯಕನು. |
| 18 ವಿಚಿತ್ರಸೇನ | ಕುಮತಿಯ ಸಖನು. |



ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

॥ ॐ ॥

॥ श्रीराम ॥

॥ श्री गणेशाय नमः ॥ श्री शारदा प्रसीदतु ॥

# ಗುಣಶೋಧನ.



## ೧ನೆಯ ಅಂಕ.



ಸ್ಥಳ:— ಲಕ್ಷ್ಮೀಭವನ.

ಪಾತ್ರಗಳು:— **ಕಮಲಾದೇವಿ, ಚಿತ್ರರೇಖೆ ಮತ್ತು ಕೋಕಿಲೆ.**

ತರುಣಿಯರು ಕಮಲಗಳ ಮಧ್ಯದಲ್ಲಿ ನಿಂತು ಈಶಸ್ತವನವನ್ನು ಮಾಡುವರು.

(೧ **ಪದ.** ಮಂಗಲಾಚರಣಸ್ತೋತ್ರ.)

ರಾಗ:— ಯಮುನಕಲ್ಯಾಣ, ತ್ರಿತಾಲ.

ಧಾಟಿ:— (**सुखकर हे होवो मज वाग्वधुवंदन**)

ಮುರಹರನೇ ಬಾರೋ ಮುದ । ಬೀರ್ವುದು ಸಂತತ
ಮಾರ್ಗವನ್ನು ನೀತೋರಿ । ಸುರೇಶಾ ಶ್ರೀ ಗೋಪಾಲಾ ।
ಸುರರನು ಪೊರೆಯಲು ನೀನೇ ಸುಂ । ದರಿ ರೂಪದಿಂದಲಿ ।
ಧರಣಿಯೊಳು ಮಾಯಾವಿಯ ಮೋಹಿಸಿದೈನೀ ।
ಪರಮೇಶ ಮುರಲಿಧರನೇ ॥ ಬಾರೋಮುದ ॥ ಪ ॥

ಬೀರೋವೋದ ಭೂಮಿಗೆ ಭಾರವಹ | ದುರುಳರ ನೀ | ತರಿ
ಯುತಲಿವೀರಾ, ಬಾ, ಬಾ, ರಾಧಾಕಾಂತ ವಿಮಲಾ |
ಚರಣಕಮಲಕೆನಾವ್ | ಎರಗುವೆವೊ ಪರಮಾದರದಿ | ಧೀರಾ,
ಬಾರೋ, ನೀನೇ ಲೋಕವಕಾಯೋ ಬಾ ಗೋಪಾಲಾ ||೧||

**ಕಮಲೆಯು:**—ಜಗತ್ತಿನಲ್ಲಿಯ ವಸ್ತುಗಳಲ್ಲಿ ಅಮೌಲ್ಯವಾದ ಗುಣವೆಂಬ ರತ್ನವನ್ನು ಶೋಧಮಾಡುವ ಶ್ರೀ ಪರಮಾತ್ಮನು ಈ ಜಗತ್ತಿಗೆ ಕಲ್ಯಾಣವನ್ನು ಮಾಡಲಿ. ಕಲ್ಯಾಣ! ಕಲ್ಯಾಣ!

(ಎಂದು ಹೂವುಗಳನ್ನು ಹಾರಿಸಿ, ಎಲ್ಲರೂ ಹೋಗುವರು.)

# ೧ನೆಯ ಪ್ರವೇಶವು.

## ಸ್ಥಳ:—ಚಂಪಾರಣ್ಯಕ್ಕೆ ಹೋಗುವ ಹಾದಿಯು.

ಪಾತ್ರಗಳು:—**ಹಂಸರಾಜನು ಮತ್ತು ವೀರಸೇನನು.**

ಬರುವರೀತಿಯು:—(ಯುದ್ಧಕ್ಕೆ ಹೋಗುವ ಉಡುಪುಗಳನ್ನು ಧರಿಸಿದ ಹಂಸರಾಜನು ಬರುವನು.)

**ಹಂಸರಾಜ:**—(ಒಬ್ಬನೇ ಬಂದು ತನ್ನೊಳಗೆ) ನಾನಾರೂಪಗಳನ್ನು ತಾಳಿ ಈ ಜಗತ್ತಿನ ಭಾರವನ್ನು ಕಡಮೆ ಮಾಡುವ ಶ್ರೀ ಪರಮಾತ್ಮನೇ ವೀರಾಧಿವೀರನು; ಅವನೇ ಸ್ವತಂತ್ರನು; ಪಾಮರರಾದ ನಾವು ಅವನ ಅಧೀನರೇ ಇರುವೆವು. ದೇವಾ!

೨ ಪದ ರಾಗ:—ಭೂಪ ತ್ರಿತಾಲ.

ಧಾಟಿ:—(**अनाथ नर तपा तारक भोला**)

ರಮಾರಮಣ ಸದಾಪಾಲಿಸು ದೇವಾ |
ಭೂಮಿತಲವ ಗೋಪಾಲಾ || ಪ ||

ಯದುಕುಲತೇಜಾ ಬಾ ಬಾ ಬಾರೋ ।
ಯಾದವೇಶನೇ ದಯವಾತೋರೋ ।
ಸದಾ ಜಗವನು ಕಾವುದು ಸದಯಾ ॥ ೧ ॥

(ಹಾಡು ಮುಗಿಯುವುದರಲ್ಲಿ ಯುದ್ಧಕ್ಕೆ ಹೋಗುವ ಉಡುಪುಗಳನ್ನು ಧರಿಸಿದ ವೀರಸೇನನು ಪ್ರವೇಶಮಾಡುತ್ತಾನೆ.)

**ವೀರಸೇನ:**— ಹಂಸರಾಜರೇ! ಸ್ತ್ರೀಯರಿಗೂ ಸಜ್ಜನರಿಗೂ ಬಹು ಪೀಡೆಯನ್ನು ಕೊಡುವ ದುಷ್ಟರನ್ನು ಕೊಲ್ಲಲು ಹಸ್ತಿನಾವತಿಯಿಂದ ಹೊರಟ ನಮ್ಮ ಸೈನ್ಯವು ಕುರುಕ್ಷೇತ್ರಕ್ಕೆ ಸಮೀಪಿಸಿರಬಹುದು. ಇಂಥ ಸಮಯದಲ್ಲಿ ದೇವರ ಧ್ಯಾನವನ್ನು ಮಾಡುತ್ತ ಕುಳಿತರೆ, ಮುಂದಿನ ಆಲೋಚನೆಯು ಹೇಗೆ?

**ಹಂಸರಾಜ:**— ಮಿತ್ರನೇ! ಯಾವುದಾದರೊಂದು ಕಾರ್ಯಕ್ಕೆ ಹೊರಡುವ ಮೊದಲು ದೇವರ ನಾಮಸ್ಮರಣೆಯನ್ನು ಮಾಡದೆ ಹೋಗುವುದು ಸ್ತುತ್ಯವಲ್ಲ.

**ವೀರಸೇನ:**— ಪ್ರಜೆಗಳಿಗೆ ತಾಪವನ್ನು ಕೊಡುವ ದುಷ್ಟರನ್ನು ದಂಡಿಸಿ, ತಮ್ಮ ಉತ್ತಮವಾದ ಗುಣದ ಬೆಲೆಯನ್ನು ಜಗತ್ತಿಗೆ ತಿಳಿಸುವ ವೀರರೇ ದೇವರಿಗೆ ಪ್ರಿಯರಲ್ಲವೇ?

**ಹಂಸರಾಜ:**— ವೀರಸೇನಾ! ಹೌದು, ನೀನು ಎನ್ನುವುದು ಯೋಗ್ಯವು. ದೇವರ ದಯವಿದ್ದರೆ ನಮಗೆ ಜಯವು ನಿಶ್ಚಯವಾಗಿ ದೊರೆಯುವುದು. ದೇವಾ! ನಾರಾಯಣಾ!! ಬಾ!!! ದುಷ್ಟರ ಭಾರವನ್ನು ತಾಳದೆ ದುಃಖಿಸುತ್ತಿರುವ ಈ ಭೂದೇವಿಯ ಶೋಕವನ್ನು ಕಡಮೆ ಮಾಡುವ ವೀರಾಧಿವೀರನು ನೀನೇ! ನಾನು ನಿಮಿತ್ತಮಾತ್ರನು ದಯಮಾಡೋ! ಶರಣಾಗತರನ್ನು ರಕ್ಷಿಸೋ!!

**೩ ಪದ.** ರಾಗ:— ಯಮನ ಕಲ್ಯಾಣ ತ್ರಿತಾಲ.

ಧಾಟಿ:— (हा टकमक पाही सूर्य रजनि मुख लाल लाल)

ಬಾ ಜಲನಿಧಿ ಶಾಯಿ ನೀನು ತರಿಯೆಭವ ಜಾಲ-ಜಾಲ ।
ನಿಜರೂಪವ ತಾಳೀ ಕಲಿಯ ಸಂಹರಿಸೋ ಲೋಕಪಾಲ ॥ ಪ ॥
ಧರೆಯೊಳೀ ಪಾಪಾತ್ಮರಾದ । ಕ್ರೂರರನು ನೀನು ಕೊಂದು ನೀಗು ।
ಭಾರ ಧಾರುಣಿಪಾಲ ॥ ೧ ॥

ಒಳ್ಳೇದು. ನೀನು ಎಂದಂತೆಯೇ ಆಗಲಿ. ರಣಭೂಮಿಯ ಕಡೆಗೇ ಹೋಗುವ, ನಡೆ. (ಎಂದು ವೀರಸೇನನ ಸಂಗಡ ಹೋಗುವನು.)



# ೨ನೆಯ ಪ್ರವೇಶವು.



## ಸ್ಥಳ:— ಚಂಪಾರಣ್ಯವು.



ಪಾತ್ರಗಳು:— **ಕಮಲೆ, ಚಿತ್ರರೇಖೆ, ಕೋಕಿಲೆ ಮತ್ತು ಕುಮತಿ ರಾಜನು.**

---

ಬರುವ ರೀತಿಯು:— (ಕೋಕಿಲೆಯು ಚಿತ್ರರೇಖೆಯೊಡನೆ ಬರುವಳು.)

**ಕೋಕಿಲೆಯು:**— (ಸುತ್ತಲೂ ನೋಡಿ ಆಶ್ಚರ್ಯದಿಂದ) ಅಹಹ!!! ಈ ಅರಣ್ಯವು ಎಷ್ಟು ರಮಣೀಯವಾಗಿ ಕಾಣುವುದು! ನೋಡಿದೆಯಾ?

**ಚಿತ್ರರೇಖೆ:**— ಹೌದು. ಕೋಕಿಲೇ! ನಮ್ಮ ಪ್ರಿಯ ಗೆಳತಿಯಾದ ಕಮಲೆಯು ಇನ್ನೂ ಇಲ್ಲಿಗೆ ಬಂದಿಲ್ಲವಲ್ಲ!

**ಕೋಕಿಲೆ:**— ಕಮಲೆಯು ಚಂದ್ರಶೇಖರ ಮಹಾರಾಜರೊಡನೆ ಬೇಟೆಯಾಡುವುದಕ್ಕೆ ಮೇಲಿಂದ ಮೇಲೆ ಇಲ್ಲಿಗೆ ಬರುವಳು. ಇತ್ತಿತ್ತಲಾಗಿ ಅವಳಿಗೆ ಬೇಟೆಯಾಡುವುದಂತೂ ಬಹು ಪ್ರಿಯವಿಷಯವಾಗಿದೆ. ಈ ದಿವಸ ಅವಳು ಇಲ್ಲಿಗೆ ಬರುವ ಸಂಭವವಿರುವುದರಿಂದ ನಾನು ನಿನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಿರುವೆನು.

**ಚಿತ್ರರೇಖೆ:**— (ಆಶ್ಚರ್ಯದಿಂದ) ಕೋಕಿಲೇ! ಸ್ತ್ರೀಯರು ಬೇಟೆಯಾಡುವುದು ಧರ್ಮವೇ?

**ಕೋಕಿಲೆ:**— ಧರ್ಮವಲ್ಲದೆ ಏನು? ನಮ್ಮ ಕ್ಷತ್ರಿಯ ಕುಲದಲ್ಲಿ ಹುಟ್ಟಿದ ಸ್ತ್ರೀಯರು ವೀರರಂತೆ ರಣಭೂಮಿಯಲ್ಲಿ ಹೋರಾಡಿ ಹೆಸರಿಗೆ ಬಂದಿಲ್ಲವೇ? ಇದಲ್ಲದೆ ಚಂದ್ರಶೇಖರ ಮಹಾರಾಜರಿಗೆ ಪುತ್ರಸಂತಾನವಿಲ್ಲದುದರಿಂದ ಅವರು ಕಮಲೆಯೇ ಪುತ್ರನೆಂದು ಭಾವಿಸಿ, ಅವಳಿಗೆ ಯುದ್ಧಕಲೆಯನ್ನು ಕಲಿಸಿರುವರು.

**ಚಿತ್ರರೇಖೆ:**— ಹೀಗೇನು? ಸಖಿಯೇ! ಕಮಲಾದೇವಿಯು ನನ್ನ ಹತ್ತಿರ ಇಲ್ಲದಿದ್ದರೆ, ನನ್ನ ಮನಸ್ಸಿಗೆ ಸಮಾಧಾನವೇ ಆಗುವುದಿಲ್ಲ. ನೀನು ಇಲ್ಲಿಯೇ ಇರು; ನಾನು ತುಸ ಮುಂದಕ್ಕೆ ಹೋಗಿ ಅವಳು ಬರುವ ಮಾರ್ಗವನ್ನು ತಿಳಿದುಕೊಂಡು ಬರುವೆನು. (ಎಂದು ಮುಂದಕ್ಕೆ ಹೋಗಿ, ತನ್ನ ಕಡೆಗೆ ಓಡುತ್ತ ಬರುವ ಚಿಗರಿಯನ್ನು ನೋಡಿ) ಕೋಕಿಲೇ! ಈ ಚಿಗರಿಯು ನಮ್ಮ ಕಡೆಗೆ ಓಡುತ್ತ ಬರುವುದು ನೋಡೆ. ಸಿಂಹಿಣಿಯು ಇದರ ಬೆನ್ನು ಹತ್ತಿ ಬರುವುದೆಂಬದಾಗಿ ನನಗೆ ಭಾಸವಾಗುವುದು. (ಎಂದು ನಡುಗಹತ್ತುವಳು.)

**ಕೋಕಿಲೆ:**—(ತೆರೆಯ ಕಡೆಗೆ ನೋಡಿ) ಸಖಿಯೇ! ಹೆದರಬೇಡ, ಹೆದರಬೇಡ; ಸಿಂಹಿಣಿಯು ಬಂದಿಲ್ಲ. ನಮ್ಮ ಪ್ರಿಯಸಖಿಯೇ ಇತ್ತಕಡೆಗೆ ಬರುತ್ತಿರುವಳು, ನೋಡು. ಈ ಸುಂದರಿಯು ಕೇಶಪಾಶವನ್ನು ಬಿಟ್ಟು ಕೈಯಲ್ಲಿ ಬಾಣವನ್ನು ಹಿಡಿದಿರುವುದರಿಂದ ಪ್ರತಿ ಮೃತ್ಯುದೇವತೆಯಂತೆಯೇ ತೋರುವಳು.

**ಚಿತ್ರರೇಖೆ:**— ಹೌದು. ಇವಳ ರೂಪವು ನನ್ನನ್ನು ಸಹ ಹೆದರಿಸಿರುವುದರಿಂದ ಈ ಚಿಕ್ಕ ಚಿಗರಿಯು ಓಡುತ್ತ ಹೋದುದೇನಾಶ್ಚರ್ಯವು ಹಾಗೂ ಸಾವಿಗೆ ಅಂಜದವರು ಯಾರು?

**ಕಮಲೆ:**—(ಚಿಗರಿಯು ಓಡಿಹೋದ ಸ್ವಲ್ಪ ಸಮಯದಲ್ಲಿ ಬೇಟೆಗೆ ಹೋಗುವ ಉಡುಪುಗಳನ್ನು ಧರಿಸಿದ ಕಮಲೆಯು ಬಂದು, ತನ್ನೊಳಗೆ) ನಾನು ಇಲ್ಲಿಯ ವರೆಗೆ ಬೆನ್ನು ಹತ್ತಿಬಂದ ಚಿಗರಿಯು ಎತ್ತ ಕಡೆಗೆ ಓಡಿ ಹೋಗಿರಬಹುದು? (ತುಸ ವಿಚಾರಿಸಿ) ಹಾ! ಇಲ್ಲಿ ಎಲ್ಲಿಯಾದರೂ ಅಡಗಿ ಕೊಂಡಿರಬಹುದು. (ಎಂದು ಸುತ್ತಲೂ ನೋಡುವಾಗ, ತನ್ನ ಸಖಿಯರನ್ನು ನೋಡಿ ಆಶ್ಚರ್ಯದಿಂದ) ಚಿತ್ರರೇಖೇ! ಕೋಕಿಲೇ! ನೀವು ಇಲ್ಲಿಗೆ ಯಾವಾಗ ಬಂದಿರಿ? ನನ್ನ ಬೇಟೆಯು ಎತ್ತ ಕಡೆಗೆ ಓಡಿಹೋಯಿತು? ನಾನು ಅದರ ಪ್ರಾಣವನ್ನು ತೆಗೆದುಕೊಳ್ಳದೆ, ಅರಮನೆಗೆ ಹೋಗುವುದಿಲ್ಲವೆಂದು ನಿಶ್ಚಯಿಸಿರುವೆನು.

**ಕೋಕಿಲೆ:**— ಈ ಸುಂದರವಾದ ಚಿಕ್ಕ ಚಿಗರಿಯನ್ನು ಕೊಲ್ಲಬೇಡ; ಕಂಡೆಯಾ! ಅಗೋ, ಆ ಚಿಗರಿಯು ಓಡಿ ಓಡಿ ದಣಿದು, ಅಲ್ಲಿಯೇ ನಿಂತಿದೆ,

ನೋಡು! ನಿನ್ನನ್ನು ನೋಡಿ ಪುನಃ ಓಡಹತ್ತಿತು.

**ಕಮಲೆ:**— ಹೌದು. ಸಖಿಯರೇ! ಓಡಿಹೋಗುತ್ತಿರುವ ಈ ಚಿಕ್ಕ ಚಿಗರಿಯು ಎಷ್ಟು ಚಂದ ಕಾಣುವುದು ನೋಡಿದಿರಾ? ಕೋಕಿಲೇ!

**೪ ಪದ.** ಧಾಟಿ:— (ನೀರು ಚಿಮ್ಮಡಿಸುವಾ ಬನ್ನಿರೆ ಬನದೊಳು.)

ಹಾರುವದೀ ನೃಗ | ದೂರದೆ ಜವದೊಳು |
ನೀರಜಮುಖಿಭಯ | ದೋರುತವನದೊಳು || ಪ ||
ಹರಣವನುಳುಹಲು | ಮರೆಯಲಿ ನಿಲ್ಲುತ |
ತುರಿಹದಿಚರಿಪುದೆ | ತರತರನಡುಗುತ |
ಕರದಲಿಹೊಳೆಯುವ | ಶರವನೆ ನೋಡಿ || ೧ ||
ಬಳಕುತಚರಿಪುದು | ಬಲುಹಸಿದರುತಾ |
ಇಳೆಯಲಿ ಬೆಳೆದಿಹ | ಎಳೆಯೆಳೆ ಹುಲ್ಲನೆ |
ಮೆಲ್ಲದೆ ಹರಣವ | ನುಳುಹಲು ನೀ ನೋಡೇ || ೨ ||

**ಕೋಕಿಲೆಯು:**— ನೀನು ಹೇಳುವುದೆಲ್ಲ ನಿಜವು. ಕವಿಗಳು ತರುಣಿಯರ ಕಣ್ಣುಗಳಿಗೆ ಚಿಗರಿಯು ಕಣ್ಣುಗಳ ಉಪಮೆಯನ್ನು ಕೊಡುವ ರೂಢಿಯುಂಟು. ಹೀಗಿರಲು ನಮಗೆ ಸಂಬಂಧವಾದ ವಸ್ತುವನ್ನು ನಾವೇ ನಾಶ ಮಾಡುವುದು ಅನ್ಯಾಯವು. ಸಖಿಯೇ! ಈ ನೃಗವು ತನ್ನನ್ನು ಕೊಲ್ಲಬೇಡವೆಂದು ದೀನಸ್ವರದಿಂದ ನಿನಗೆ ಹೇಳಿಕೊಳ್ಳುವುದಕ್ಕೆ ಪ್ರೇಮದೃಷ್ಟಿಯಿಂದ ನಿನ್ನನ್ನೇ ನೋಡುತ್ತ ನೋಡುತ್ತ ಓಡುತ್ತಿರುವುದು. ದಯಮಾಡಿ ಇದನ್ನು ಕೊಲ್ಲಬೇಡವೆ.

**ಕಮಲೆ:**— ಕೋಕಿಲೇ! ನಿನ್ನ ಹೃದಯವು ಬಹು ಕೋಮಲವಾಗಿರುವುದರಿಂದ ನಿನ್ನ ಮನಸ್ಸಿಗೆ ತಾಪವನ್ನು ಕೊಡುವ ಕಠಿನ ಕೆಲಸವು ನನ್ನಿಂದ ಎಂದಾದರೂ ಆದೀತೇ? ಇಕೋ! ಬಿಲ್ಲಿನಲ್ಲಿಯ ಬಾಣವನ್ನು ತೆಗೆದೆನು. (ಎಂದು ಬಾಣವನ್ನು ತೆಗೆದು) ಸಖಿಯರೇ! ಈಗಾದರೂ ನಿಮ್ಮ ಮನಸ್ಸಿಗೆ ಸಮಾಧಾನವಾಯಿತೇ?

**ಕೋಕಿಲೆ:**— ಆಗದೇ ಏನು? ಕಮಲೆ! ನೀನು ಬಹು ಶ್ರಮಪಟ್ಟು

ಬಂದಿರುವೆಯೆಂಬುದನ್ನು ನಿನ್ನ ಮುಖದ ಮೇಲಿನ ಬೆವರಿನ ಹನಿಗಳೇ ನನಗೆ ತಿಳಿಸುವುವು. ಇನ್ನು ನೀನು ಇಲ್ಲಿಯೇ ಮನೋಹರವಾಗಿ ಕಾಣುವ ಶಿಲಾ ತಲದ ಮೇಲೆ ಕುಳಿತು ನಿನಗಾದ ತಾಪವನ್ನು ಕಳೆದುಕೊಳ್ಳುವಂತೆ, ಬಾ.

**ಕಮಲೆ:**— ಹಾಗೇ ಆಗಲಿ. (ಎಂದು ಹಾಸಿಗೆಗಲ್ಲಿನ ಮೇಲೆ ಕುಳಿತು,) ಸಖಿಯರೇ! ಬನ್ನಿರಿ; ನೀವೂ ನನ್ನ ಹತ್ತಿರ ಕುಳಿತುಕೊಳ್ಳಿರಿ. (ಎಂದು ಸಖಿ ಯರನ್ನು ತನ್ನ ಹತ್ತಿರವೇ ಕುಳ್ಳಿರಿಸಿಕೊಳ್ಳುವಳು.)

**ಚಿತ್ರರೇಖೆ:**— ನಮ್ಮ ಪ್ರಿಯ ಸಖಿಯು ಬಿಸಿಲಿನಲ್ಲಿ ಬಂದುದರಿಂದ ಅವಳ ಮುಖವು ಎಷ್ಟು ಕೆಂಪಾಗಿದೆ ನೋಡಿದೆಯಾ?

**ಕೋಕಿಲೆ:**— ಹೌದವ್ವಾ!!! ಇವಳ ಕೆಂಪಾದ ಮುಖವು ಕೆಂಪು ಕಮಲ ವನ್ನೇ ಹೋಲುವುದು. ಹಾಗೂ ಕಮಲೆಯ ಹೊಂಬಣ್ಣದ ಮೈಕಾಂತಿಯೂ, ಓರೆಗಣ್ಣಿನ ನೋಟವೂ, ಉರೋಜಗಳ ವಿಸ್ತಾರವೂ, ತರುಣರ ಮನಸ್ಸನ್ನು ತಮ್ಮ ಕಡೆಗೆ ಎಳೆದುಕೊಳ್ಳುವುವು. ಇವಳ ಮನೋಹರವಾದ ಮುಖವು ಮೇಘರಾಜನನ್ನು ಸಹ ಮರುಳು ಮಾಡಿದೆ. ಎಂದ ಮೇಲೆ ಇಲ್ಲಿಯ ರಾಜ ಪುತ್ರರು ಈ ಪ್ರಾಯದ ಕನ್ಯಕೆಗೆ ಮರುಳಾಗುವುದೇನಾಶ್ಚರ್ಯವು! (ಎಂದು ಮುಗುಳುನಗೆ ನಗುವಳು.)

**ಕಮಲೆ:**— ಹೋಗಿರೇ ಗೆಳತಿಯಿರಾ! ನಾನೇನು ಅಷ್ಟು ಸುಂದರಳಲ್ಲ. ಮೇಘರಾಜನು ಅತಿ ಚೆಲುವೆಯಾದ ಸೌದಾಮಿನಿಯನ್ನು ಬಿಟ್ಟು, ನನ್ನನ್ನು ಲಗ್ನವಾಗುವನೇ? ಅವನಿರುವ ಸ್ಥಳವು ಆಕಾಶವಲ್ಲವೇ! ಹುಚ್ಚಿಯಂತೆ ಮಾ ತಾಡಬೇಡ.

**ಕೋಕಿಲೆ**— ನಾನು ಹುಚ್ಚಳಲ್ಲ. ಸಖಿಯೇ! ನಿನ್ನ ಮುಖವನ್ನು ನೋಡಿಯೇ ಈ ಮೇಘರಾಜನು ಜನರಲ್ಲಿ ಕಾಮತಾಪವನ್ನು ಹೆಚ್ಚಿಸುವ ನೀಚ ಚಂದ್ರನೇ ಇದು ಎಂದು ಭ್ರಾಂತಿಗೊಂಡು, ನಿನ್ನನ್ನು ತನ್ನ ಬಲೆಯಲ್ಲಿ ಕಟ್ಟಿ ಹಾಕಿದ್ದಾನೆ. ದುಷ್ಟರನ್ನು ದಂಡಿಸುವುದೇ ರಾಜರ ಧರ್ಮವು.

**ಕಮಲೆ:**— ಹಾಗಾದರೆ ಆ ಬಲೆಯು ಎಲ್ಲಿದೆ ಹೇಳು.

**ಕೋಕಿಲೆ:**— ನೀನು ಧರಿಸಿದ ಮೋಡ ಬಣ್ಣದ ಉಡಿಗೆಯೇ ಮೇಘ ರಾಜನ ಬಲೆಯು.

**ಕಮಲೆ:**—ಚಿತ್ರರೇಖೇ! ಕೋಕಿಲೆಯು ಸ್ವರವು ಮಧುರವಾಗಿರುವುದಲ್ಲದೆ, ಇವಳಲ್ಲಿ ಚೆನ್ನಾಗಿ ವರ್ಣಿಸುವ ಶಕ್ತಿಯೂ ಉಂಟು.

**ಚಿತ್ರರೇಖೆ:**—(ಚೇಷ್ಟೆಯಿಂದ) ಅದಿರಲಿ; ಗೆಳತಿಯೇ! ಮೇಘರಾಜನು ತನ್ನ ಬಲೆಯನ್ನು ಚಂದ್ರನ ಮೇಲೆ ಪಸರಿಸುವಂತೆ ಕಮಲಾದೇವಿಯ ಮುಖಚಂದ್ರನ ಮೇಲೆ ಏಕೆ ಪಸರಿಸಲಿಲ್ಲ?

**ಕೋಕಿಲೆ:**—ಅವನು ಇವಳ ಮುಖದ ಲಾವಣ್ಯವನ್ನು ನೋಡಿ, ಹುಚ್ಚನಾಗಿ ತನ್ನ ಬಲೆಯನ್ನು ಇವಳ ಮುಖದ ಮೇಲೆ ಪಸರಿಸಲು ಸಹ ಮರೆತು ಬಿಟ್ಟನು. (ನಗುತ್ತ) ಸುಂದರಿಯರ ಸೌಂದರ್ಯವು ಸ್ವಾಭಾವಿಕವಾಗಿ ಎಲ್ಲರನ್ನು ಮರುಳು ಮಾಡಿಯೇ ಮಾಡುವುದು. ಒಳ್ಳೇದು, (ತುಸ ವಿಚಾರಿಸಿ) ಚಿತ್ರರೇಖೇ! ಈ ಮನಮೋಹಿನಿಗೆ ತಕ್ಕ ರಾಜಪುತ್ರರು ಈ ಭರತಖಂಡದಲ್ಲಿ ಯಾರು ತಾನೆ ಇರುವರೇ? ಹೇಳು; ನೋಡೋಣ!

**ಚಿತ್ರರೇಖೆ:**—ಈರ್ವರು.

**ಕೋಕಿಲೆ:**—ಅವರು ಯಾರು?

**ಚಿತ್ರರೇಖೆ:**—ಹಸ್ತಿನಾವತಿಯ ಹಂಸರಾಜನು. ಮತ್ತೊಬ್ಬನು ಕುವಲಯಪುರದ ಕುಮತಿರಾಜನು.

**ಕೋಕಿಲೆ:**—ಹಾಗಾದರೆ ಅವರಲ್ಲಿ ನಮ್ಮ ಪ್ರಿಯ ಸಖಿಯಾದ ಕಮಲೆಗೆ ಯೋಗ್ಯನು ಯಾರು?

**ಕಮಲೆ:**—ಹಾ!!! ಸಾಕು ಬಿಡಿರೇ. ನಾನು ನಿಮ್ಮೊಡನೆ ಇಲ್ಲಿಗೆ ಬರಲಿಲ್ಲವೆಂದು ಈಗ ನೀವು ನನ್ನನ್ನು ಸಿಟ್ಟಿಗೆಬ್ಬಿಸುವ ಹಂಚಿಕೆಯಲ್ಲಿ ತೊಡಗಿರುವಂತೆ ಕಾಣುವುದು. ನನ್ನನ್ನು ಈಪರಿ ವರ್ಣಿಸುವುದು ನಿಮಗೆ ಯೋಗ್ಯವಾಗಿ ತೋರುವುದೇ?

**ಕೋಕಿಲೆ:**—ಹಾಗಾದರೆ ಯಾರನ್ನು ವರ್ಣಿಸಲಿ?

**ಕಮಲೆಯು:**—ಜಗತ್ತಿನ ಕಲ್ಯಾಣಕ್ಕಾಗಿ ತನ್ನ ಶ್ರಮವನ್ನು ಲೆಕ್ಕಿಸದೆ ಆಕಾಶ ಮಾರ್ಗದಲ್ಲಿ ಸಂಚರಿಸುವ ಮೇಘರಾಜನನ್ನು ವರ್ಣಿಸು.

**ಕೋಕಿಲೆ:**—ನೀನು ರಾಜಪುತ್ರಿಯು, ಚತುರೆಯು. ಆದ್ದರಿಂದ ನೀನೇ ಅವನ ವರ್ಣನೆಯನ್ನು ಮಾಡಲಿಕ್ಕೆ ತಕ್ಕವಳು.

**ಕಮಲೆ:**—ಒಳ್ಳೇದು. ಹಾಗೇ ಆಗಲಿ.

ಗ್ರಂಥಾಲಯ

**೫ ಪದ.** ರಾಗ: — ಸಾರಂಗ.

ಧಾಟಿ: — (ಸಖಿಯೇ ಪೋಗುವುದೊಳಿತಲ್ಲಾ)

ಸಖಿಯೇ ಲೋಕದ ಜನಕೆಲ್ಲಾ | ಸುಖವನು ಕೊಡುವನು ಪಯೋಧರಾ || ಪ ||

ಶೀಲೆ ಜಗವ ಪೊರೆಯುವುದಕೆ | ನೆಳಲ ಬಿಸಲ ನೋಡದೆ |
ಇಳೆಗೆ ಪಯವನಿತ್ತು | ಬಲುಮುದದಲಿ ಜನನಿಯತೆರ || ೧ ||

ಎಲ್ಲರಿಗೂ ಅಮೃತಕ್ಕೆ ಸಮವಾದ ನೀರನ್ನು ದಾನಮಾಡಲು ಸಿದ್ಧನಾದ ಈ ತೇಜಃಪುಂಜನಾದ ಮೇಘರಾಜನು ಹಂಸರಾಜನ ಶುಭ್ರವರ್ಣವನ್ನು ಸಹ ಹೇಗೆ ಜರೆಯುತ್ತಿರುವನು, ನೋಡಿದೆಯಾ?

**ಕೋಕಿಲೆ:** — ಚಿತ್ರರೇಖೆಯೇ! ನಮ್ಮ ಪ್ರಿಯ ಸಖಿಯಾದ ಕಮಲೆಯು ಹಂಸರಾಜನೊಡನೆ ಲಗ್ನವಾಗುವ ಇಚ್ಛೆಯನ್ನು ನಮ್ಮ ಮುಂದೆ ಎಷ್ಟೋಸಾರೆ ಪ್ರಕಟಿಸಿರುತ್ತಾಳೆ. ಅಂತೆಯೇ ಇವಳು ಆ ಮಹಾತ್ಮನ ಹೆಸರನ್ನು ಮೇಲಿಂದ ಮೇಲೆ ಉಚ್ಚರಿಸುವಳು.

**ಕಮಲೆ:** — ಅದಿರಲಿ; ಸಖಿಯರೇ! ಒಮ್ಮಿಂದೊಮ್ಮೆ ನನ್ನ ಬಲ ಗಣ್ಣು ಹಾರುತ್ತಿದೆಯಲ್ಲ. ಈ ದಿವಸ ನನ್ನ ಮೇಲೆ ಬರುವ ಸಂಕಟವು ಯಾವುದಿರಬಹುದು?

**ಚಿತ್ರರೇಖೆ:** — ಕೋಮಲಾಂಗಿಯೇ! ಇದು ಘೋರವಾದ ಅರಣ್ಯವಲ್ಲ. ಇಲ್ಲಿ ಮನುಷ್ಯರ ಸುಳಿದಾಟವೇ ಇಲ್ಲ. ಇನ್ನುಮೇಲೆ ನಾವು ಬಹಳ ಹೊತ್ತಿನ ವರೆಗೆ ಚೇಷ್ಟೆಯನ್ನು ಮಾಡುತ್ತ ಇಲ್ಲಿ ನಿಲ್ಲುವುದು ಸರಿಯಲ್ಲ. (ಎಂಬು ತೆರೆಯ ಕಡೆ ನೋಡಿ) ಅವ್ವಯ್ಯಾ!!! ಇತ್ತಕಡೆಗೆ ಯಾವನೋ ಒಬ್ಬ ರಾಜಪುತ್ರನು ಬರುತ್ತಿರುವನಲ್ಲ!! ಆದ್ದರಿಂದ ಇಲ್ಲಿ ಎಲ್ಲಿಯಾದರೂ ಹತ್ತಿರದಲ್ಲಿರುವ ಗಿಡದ ಮರೆಗೆ ಹೋಗಿ ನಿಲ್ಲುವ; ಬನ್ನಿರೆ. (ಎಂದು ಎಲ್ಲರು ಹೋಗಿ ಗಿಡದ ಮರೆ ಯಲ್ಲಿ ನಿಲ್ಲುವರು.)

**ಕುಮತಿ:** — (ಪ್ರವೇಶ ಮಾಡಿ ತನ್ನೊಳಗೆ) ನಾನು ಕುವಲಯಪುರದ ಕುಮತಿರಾಜನು; ನನ್ನ ರಾಜ್ಯದಲ್ಲಿ ಲಕ್ಷ್ಮಿಯು ವಾಸಮಾಡಿರುತ್ತಾಳೆ. ಧನಿಕ

ರಾದ ಮಾಂಡಲಿಕರಿಗೆ ಸರಿಯಾದವರು ಈ ಲೋಕದಲ್ಲಿ ದೊರೆಯುವುದು ಅಸಂಭವವೇ ಸರಿ. ನಮ್ಮಂಥವರು ವ್ಯರ್ಥವಾಗಿ ವೇಳೆಯನ್ನು ಕಳೆಯದೆ ತರುಣಿಯರನ್ನು ಮೋಹಪಾಶದಲ್ಲಿ ತೊಡರಿಸಿ, ಮಾನವನ್ನು ಹೊಂದುವುದೇ ಯೋಗ್ಯವು. ಸ್ತ್ರೀಯರ ಪ್ರೇಮವನ್ನು ಸಂಪಾದಿಸಿ ಕೀರ್ತಿಯನ್ನು ಪಡೆಯುವುದೇ ರಾಜಧರ್ಮದ ಲಕ್ಷಣವು. ಈಗ ನಾನು ಧನುರ್ಬಾಣವನ್ನು ಹಿಡಿದುಕೊಂಡಿರುವುದು ಬೇಟೆಯಾಡುವುದಕ್ಕಲ್ಲ ; ಸ್ತ್ರೀಯನ್ನು ಅಂಜಿಸುವುದಕ್ಕಾಗಿ. ಒಳ್ಳೇದು; (ಎಂದು ತುಸ ವಿಚಾರಿಸಿ) ನನ್ನ ಪ್ರಿಯ ಮಿತ್ರನಾದ ಚಂದ್ರಶೇಖರನ ಮಗಳಾದ ಕಮಲೆಯು ಬೇಟೆಯಾಡುವುದಕ್ಕೆ ಇಲ್ಲಿಗೆ ಮೇಲಿಂದ ಮೇಲೆ ಬರುತ್ತಾಳೆಂದು ಕೇಳಿಯೇ ನಾನು ಇಲ್ಲಿಯ ವರೆಗೆ ಬಹು ಕುತೂಹಲದಿಂದ ಧಾವಿಸುತ್ತ ಬಂದೆನು. ಆದರೆ ಆ ರಮಣಿಯು ಇಲ್ಲಿ ಎಲ್ಲಿಯೂ ಕಾಣುವದಿಲ್ಲವಲ್ಲ ! (ಎಂದು ಸುತ್ತಲೂ ನೋಡಿ ಚಕಿತನಾಗಿ) ಓಹೋ! ರೂಪದಲ್ಲಿ ಪ್ರತಿರತಿಯಂತೆ ಕಾಣುವ ಸುಂದರಿಯೇ ಇಲ್ಲಿ ಇರುವಳು! ಇನ್ನು ಮೇಲೆ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲ ! ಇಂಥ ಸುಂದರಿಯರ ದರ್ಶನವು ಸಾಮಾನ್ಯರಿಗೆ ಆಗುತ್ತದೆಯೇ? ಮೇಲಾಗಿ ಇವಳನ್ನು ವರ್ಣಿಸುವುದು ಕವಿಗಳಿಗೂ ಸಹ ಅಸಾಧ್ಯವಾಗಿರುವುದು. ಅಹಹ! ಎಂಥ ಚಲುವೆಯರು ಇಂತಹ ಸುಂದರಿಯರ ಸೇವೆಯಲ್ಲಿರುವ ಪುರುಷನೇ ಧನ್ಯನು! ನಾನು ನಿಮ್ಮ ಸೇವಕನು (ಎಂದು ಸಮೀಪಕ್ಕೆ ಹೋಗಿ) ಚಲುವೆಯರೇ! ನೀವು ನನ್ನ ಸಂಗಡ ಹೆದರದೆ ಮಾತಾಡಕೊಡದೆ (ಅವರು ಹೆದರಿ ಹಿಂದಕ್ಕೆ ಸರಿಯಲು, ಕುಮತಿಯು ಕಮಲೆಯ ಹತ್ತಿರ ಹೋಗಿ) ಕಮಲೇ! ಹೆದರಿ ಓಡಿಹೋಗಬೇಡ; ನನ್ನೊಡನೆ ಮಾತನಾಡು. ಎಲ್ಲಿಗೆ ಹೋಗುತ್ತಿಯೆ? ಹೆದರಿಕೆ ಏಕೆ?

### ೬ ಪದ.

ಧಾಟಿ: — (ಬೆದರ ಬ್ಯಾಡೇ ಮದಿರಲೋಚನೆ.)

ಹೆದರಬೇಡೇ ಹರಿಣಲೋಚನೆ । ನಾನರಸುತಿಳಿಯೆ ।
ಹೆದರ ಬೇಡೆ ಕೇಳ್ ಮನವಿದು । ವದನವೇಸರೋಜವೆಂದು ।
ಮಧುಪನೋಲು ಚರಿಪುದೆ ತಾ । ಮಧುವ ಸವಿಯಲು ತಣಿಯದೆ
॥ ಪ ॥

ವನಜದಂದದ ಸೊಗಸನುರೆ ಪೋಲ್ವ ಸುಂದರಮುಖದಂದವ |
ಎನಗೆ ತೋರೆ ನಿನ್ನದೆನ್ನ | ತನು | ಮನ | ಧನ | ವನಿತೆ |
ಎನಗೆ || ೧ ||
ಸರಸ ಕೋಮಲಾಂಗಿಎನ್ನೊಳು | ಸರಸವಾಡುತೆನ್ನೊಡನೆ ಅರ
ಗಿಳಿಯತೆರ ನುಡಿಯದಲೆ | ಮರುಳೆ | ಮರಳಿ | ಕೊರಳ |
ತಿರುವುದೇಕೆ || ೨ ||

ನಾನು ಲಕ್ಷ್ಮಿಯ ಪ್ರೇಮಕ್ಕೆ ಪಾತ್ರನಾದ ಕುಮತಿರಾಜನಲ್ಲವೆ? ಮತ್ತು ನಿಮ್ಮ ಪ್ರಿಯ ಸಖಿಯ ತಂದೆಯಾದ ಚಂದ್ರಶೇಖರನು ಕೇವಲ ನನ್ನ ಮಿತ್ರನು. ಹೀಗಿರಲು ನೀವು ನನ್ನೊಡನೆ ಏಕೆ ಮಾತಾಡಬಾರದು?

**ಚಿತ್ರರೇಖೆ:**—ರಾಜರೇ! ತರುಣಿಯರ ಸಮೀಪಕ್ಕೆ ಈ ರೀತಿ ಬರುವುದೇನು ಚಂದ?

**ಕುಮತಿ:**—ಏನು ಹೇಳುತ್ತಿಯೆ? ನಾನು ನನ್ನ ಕರ್ತವ್ಯವನ್ನು ಮಾಡಿದೆನು; ಇದರಲ್ಲಿ ನನ್ನದೇನು ಅನ್ಯಾಯವು? ಅನೀತಿಯನ್ನು ಆಚರಿಸಲಿಲ್ಲ.

**ಕೋಕಿಲೆ**—ನೀವು ಉನ್ಮತ್ತರಾದಂತೆ ಕಾಣುವಿರಿ?

**ಕುಮತಿ:**—ಆದೇನಿಲ್ಲ. ಆದರೆ ನಿಮ್ಮಿಬ್ಬರ ನಡುವೆ ಬಲು ಚಂದವಾಗಿ ಶೋಭಿಸುವ ಈ ತರುಣೀಮಣಿಯು ನನ್ನ ಪಟ್ಟದರಸಿಯು ಆಗಲೊಪ್ಪಿದರೆ ನಾನು ನನ್ನ ಬೊಕ್ಕಸದಲ್ಲಿಯ ಸಂಪತ್ತನ್ನು ಅವಳಿಗೆ ಅರ್ಪಿಸುವೆನು.

**ಚಿತ್ರರೇಖೆ:**—ನಿಮ್ಮ ಸಂಪತ್ತು ನಿಮ್ಮ ಹತ್ತಿರವೇ ಇರಲಿ; (ಇತ್ತ ತಿರುಗಿ) ಕೋಕಿಲೇ! ಇವರೊಡನೆ ಮಾತಾಡಬೇಡ. ಮಾತಾಡುತ್ತ ಹೋದ ಹಾಗೆ ಇವರ ಹುಚ್ಚು ಮತ್ತಿಷ್ಟು ತಲೆಗೇರುವುದು.

**ಕೋಕಿಲೆ:**—ಹೌದು; ಇವರ ಹುಚ್ಚು ಬಿಡಿಸುವುದಕ್ಕೆ ಯಾರಿಂದಲೂ ಆಗದು; ಇನ್ನು ಮೇಲೆ ನಾವು ಇಲ್ಲಿ ನಿಲ್ಲದೆ ಅರಮನೆಗೆ ಹೋಗುವ; ನಡೆಯಿರಿ.

**ಕುಮತಿ:**—ತರುಣಿಯರೇ! ಅರಮನೆಗೆ ಹೋಗುವ ಯೋಚನೆಯನ್ನು ಸರ್ವಥಾ ಮಾಡ ಬೇಡಿರಿ. ನೀವು ಹೋದರಂತೂ, ನಾನು ನಿಮ್ಮ ವಿಯೋಗ

ತಾಪದಿಂದ ಬಳಲಿ ಇಲ್ಲಿ ಸಾಯುವುದೇ ನಿಶ್ಚಯವು. (ಕೋಕಿಲೆಯನ್ನು ಕುರಿತು) ಕೋಕಿಲೇ! ನನ್ನ ಹುಚ್ಚು ಬಿಡಿಸುವವಳು ನಿನ್ನ ಸಖಿಯಾದ ರಾಜಪುತ್ರಿಯೇ ಇರುವಳು. ಇವಳು ಬಂದು ನನ್ನನ್ನು ಆಲಿಂಗಿಸಿದರಾಯಿತು; ನನ್ನ ಹುಚ್ಚು ತನ್ನಷ್ಟಕ್ಕೆ ತಾನೇ ಬಿಟ್ಟು ಹೋಗುವುದು. (ಎಂದು, ಕಮಲೆಯ ಕಡೆಗೆ ನೋಡಿ) ರಮಣೀ! ನನ್ನ ಇಚ್ಛೆಯನ್ನು ಪೂರ್ಣಮಾಡಬಾರದೇ?

**ಕಮಲೆ:**—ಸ್ತ್ರೀಯರ ರಕ್ಷಣೆಯನ್ನು ಮಾಡುವುದೇ ನಿಮ್ಮ ಧರ್ಮವು. ನಿರಪರಾಧಿಗಳಾದ ನಮ್ಮನ್ನು ಕಾಡುವುದು ತಮ್ಮಂಥವರಿಗೆ ಸರಿಯಲ್ಲ. ಇದಲ್ಲದೆ, ತಮ್ಮ ಪ್ರೇಮಕ್ಕೆ ಪಾತ್ರರಾಗಲು ಒಪ್ಪದವರ ಕೂಡ ಪ್ರೇಮಭಾಷಣವನ್ನು ಮಾಡುವುದರಿಂದ ತಮ್ಮ ಕೀರ್ತಿಗೆನೇ ಕಲಂಕ ಬರುವುದು. ನೀತಿಯಿಂದ ನಡೆದರೆ ನಿಮ್ಮ ಕೀರ್ತಿಯು ಸ್ಥಿರವಾಗಿ ನಿಲ್ಲುವುದು.

**ಕುಮತಿ:**—ಸುಂದರಿಯೇ! ಸ್ತ್ರೀಯರ ಪ್ರೇಮಕ್ಕೆ ಮೆಚ್ಚುವುದೇ ಪುರುಷರ ಸ್ವಭಾವವಾಗಿದೆ. ಎಲ್ಲರಿಗೂ ಶ್ರೇಷ್ಠನಾದ ವಿಷ್ಣುವೂ ಸಹ ಸಮುದ್ರದಲ್ಲಿ ಹುಟ್ಟಿದ ೧೪ ರತ್ನಗಳಲ್ಲಿ ಸ್ತ್ರೀರತ್ನವೇ ಹೆಚ್ಚಿನದೆಂದು ತಿಳಿದು ಲಕ್ಷ್ಮಿಯನ್ನು ಸ್ವೀಕರಿಸಿದನು. ಎಂದಮೇಲೆ ನಾನು ನಿನ್ನನ್ನು ಬಯಸುವುದು ಅನೀತಿಯೇ? ಹೇಳು.

**ಕಮಲೆ:**—ದೇವರ ಉಪಮೆಯನ್ನು ಮನುಷ್ಯರಿಗೆ ಕೊಡುವುದು ಯೋಗ್ಯವಲ್ಲ. ಆತನ ದಯದಿಂದ ಈ ಜಗತ್ತಿನ ಎಲ್ಲ ಕಾರ್ಯಗಳು ಸಾಗುವುವು; ಅವನ ದಯವು ತಪ್ಪಿದ ದಿವಸವೇ ನಮ್ಮೆಲ್ಲರ ದೇಹಗಳು ಮಣ್ಣುಪಾಲಾಗುವವು; ಆ ಮಹಾತ್ಮನೇ ಲೋಕದಲ್ಲಿಯ ಎಲ್ಲ ಪದಾರ್ಥಗಳ ರುಚಿಯನ್ನು ನೋಡುವ ಸವಿಗಾರನು. ಇದಲ್ಲದೆ, ರಾಜರೇ! ಪರಸ್ತ್ರೀಯರ ಅಭಿಲಾಷೆಯನ್ನು ಮಾಡಿದ ರಾಜರು ನಾಶಹೊಂದಿದರೆಂದು ಪೂರ್ವದ ಇತಿಹಾಸಗಳ ಮೇಲಿಂದ ನಮಗೆ ತಿಳಿದುಬಂದಿದೆ. ಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡದೆ; ಅವರನ್ನು ಮಾತೆಯಂತೆ ರಕ್ಷಿಸುವವರೇ ಈ ಲೋಕದಲ್ಲಿ ಪೂಜ್ಯರು.

**ಕುಮತಿ:**—ರಾಜಪುತ್ರಿಯೇ! ನನಗೆ ನೀತಿಯು ಬೇಕಾಗಿಲ್ಲ; ನೀನು ಹೇಳಿದಂತೆ ಕೇಳಲು ನಾನು ಸಿದ್ಧನಿರುವೆನು, ನೀನು ಬಂದು ನನ್ನನ್ನು ಆಲಿಂಗಿಸು, ದಯಮಾಡು. (ಎಂದು ಅಡ್ಡಗಟ್ಟುವನು ಕಮಲೆಯು ಚಿತ್ರರೇಖೆಯ ಹತ್ತಿರ

ಹೋಗುವಳು. ಕುಮತಿಯು ಹುಚ್ಚನಂತೆ ನಗುತ್ತ) ಕಮಲೇ! ನಾನು ನಿನ್ನ ದಾಸನು.

**ಚಿತ್ರರೇಖೆ:—** ಕಮಲೇ! ಅವರೊಡನೆ ಮಾತಾಡಬೇಡ. ಕಾಮಾಂಧರ ವಿಚಾರಶಕ್ತಿಯೇ ಕೆಟ್ಟು ಹೋಗಿರುತ್ತದೆ. ಕಾಮುಕಪುರುಷರು ಬಾಲಕೊಂಬುಗಳಿಲ್ಲದ ಶುದ್ಧ ಪಶುಗಳಾಗಿರುವರು. ಇವರಿಗೆ ನೀತಿಯನ್ನು ಹೇಳುವುದೆಂದರೆ ಕೋಣನ ಮುಂದೆ ಕಿನ್ನರಿಯನ್ನು ಬಾರಿಸಿದಂತೆಯೇ ಸರಿ. (ಕುಮತಿಗೆ) ರಾಜರೇ! ಈ ಸುಂದರಿಯನ್ನು ಕಾಡಬೇಡಿರಿ. ಪರಸ್ತ್ರೀಯರನ್ನು ಮುಟ್ಟಿದವರ ನಾಶವು ತೀವ್ರವೇ ಆಗುವುದು; ತಿಳದಿರಲಿ.

**ಕುಮತಿ:—** ಹೀ! ಹೀ! (ಎಂದು ನಗುತ್ತ) ತರುಣಿಯರ ಸ್ಪರ್ಶ ಮಾಡಿದರೆ ನಮಗೆ ಆನಂದವಾಗುವುದು; ಯಾಕಂದರೆ, ನಾರಿಯೇ ನಮಗೆ ಸ್ವರ್ಗದ ಹಾದಿಯನ್ನು ತೋರಿಸುವ ದೇವತೆಯು. (ಕಮಲಾದೇವಿಯ ಹತ್ತಿರಹೋಗಿ) ಪ್ರಿಯೇ! ಈ ದೀನ ದಾಸನನ್ನು ಕಾಡಬೇಡ. ಬಾ ಒಮ್ಮೆಯಾದರೂ ನನ್ನನ್ನು ಆಲಿಂಗಿಸು.

**೭ ಪದ** ಧಾಟಿ: **ಗಜೆಲೀಲೆ** ರಾಗ: ಪಿಲ್ಲು.

ಬಿಡೇ ಕೋಪಾ ವಿಮಲ ಶೀಲೆ |
ಕಾಡಬೇಡೇ ಕೋಮಲೆ || ಪ ||
ನಿನ್ನನು ವರಿಸುವ ಭೂಪಾಲನೊಳೀ |
ವಿನೋದಮಾಡುವರೇನೆ ಬಾಲೆ || ೧ ||
ಎರಗುವೆನೇ ಸಖಿ ನಿನ್ನಯ ಚರಣಕೆ |
ಕೊರಗುವ ದಾಸನ ಪೊರೆಯೈಸರಲೆ || ೨ ||

ಕೋಮಲಾಂಗೀ! ನನ್ನನ್ನು ಪೀಡಿಸಬೇಡೆ. ನಾನು ನಿನ್ನ ಚರಣದಾಸನಲ್ಲವೇ? (ಎಂದು ನಮುಸ್ಕಾರವನ್ನು ಮಾಡುವನು.)

**ಕಮಲೆ:—** ಛೀಃ ಛೀಃ ಇದೇನು? ನಿಮ್ಮ ನಮುಸ್ಕಾರಕ್ಕೆ ಬೆಂಕೀಹಚ್ಚಲಿ. ನನ್ನ ಮುಂದೆ ಸಹ ನಿಲ್ಲಬೇಡರಿ. (ಎಂದು ಹಿಂದಕ್ಕೆ ಸರಿದು ನಿಲ್ಲುವಳು.)

**ಕುಮತಿ:—** (ಎದ್ದು ನಿಂತು ನಡಗುತ್ತ) ನಿನ್ನಂಥ ಮಹಾತ್ಮಳಿಗೆ ನಮುಸ್ಕಾರವನ್ನು ಮಾಡದೆ ಇನ್ನಾರಿಗೆ ಮಾಡಬೇಕು. (ತನ್ನೊಳಗೆ) ಇಂದು ನಾನು ಧನ್ಯನಾದೆನು. ನನ್ನ ಕಿರೀಟಕ್ಕೆ ಇವಳ ಕೋಮಲವಾದ ಪಾದವು

ತಾಕಿತು. (ಪ್ರಕಟವಾಗಿ) ಸುಂದರಿಯೇ! ಇನ್ನು ಮೇಲೆ ನೀನು ಮುಗುಳು ನಗೆಯಿಂದ ನಗುತ್ತ ಬಂದು, ನನ್ನನ್ನು ಆಲಿಂಗಿಸು; ಎಂದರೆ ನನಗಾದ ಕಾಮ ತಾಪವು ತಾನೇ ದೂರಾಗುವುದು. (ಎಂದು ಹುಚ್ಚನಂತೆ ನಗುತ್ತ ಮುಂದಕ್ಕೆ ಹೋಗುವನು.)

**ಕಮಲೆ:**—(ಸಿಟ್ಟಿನಿಂದ) ಸರಿಯಿರಿ ಹಿಂದಕ್ಕೆ ಜೋಕೆ; ನನ್ನೊಡನೆ ಮದಾಂಧರಂತೆ ವರ್ತಿಸುವ ಸಾಹಸ ಮಾಡಿದರೆ ನಿಮಗೆ ಸ್ವಲ್ಪ ಸಹ ಕಲ್ಯಾಣ ವಾಗಲಿಕ್ಕಿಲ್ಲ.

**ಕುಮತಿ:**—ಮನಮೋಹಿನಿಯೇ! ನನಗೆ ವೃಥಾ ತಾಪವನ್ನು ಕೊಡ ಬೇಡ! ನೀನು ನನ್ನ ಇಚ್ಛೆಯನ್ನು ಪೂರ್ಣ ಮಾಡುವ ಕಾಮಧೇನುವೇ ಆಗಿರು ವಿ! ಎಂದಮೇಲೆ ನಿನ್ನ ಸ್ಪರ್ಶ ಸುಖವನ್ನು ಅನುಭವಿಸಲು ನಾನೇಕೆ ಹಿಂಜರಿ ಯಲಿ? ನೀನು ದಯಾಳುವಲ್ಲವೇ? (ಕಮಲೆಯು ಮಾತಾಡದಿರುವುದನ್ನು ನೋಡಿ) ಚಿತ್ರರೇಖೆಯೇ! ನೀನಾದರೂ ನಿನ್ನ ಸಖಿಯು ಮೌನದ ಕಾರಣವನ್ನು ನನಗೆ ಹೇಳಬಾರದೆ?

**ಚಿತ್ರರೇಖೆ:**—ಕುಮತಿರಾಜರೇ! ನಿಮಗೆ ಇಷ್ಟು ಸಹ ತೋಚಬಾರದೇ? ಪರಸ್ತ್ರೀಯರ ಮಾನಭಂಗವನ್ನು ಮಾಡುವುದರಿಂದ ಮಹಾ ಹಾನಿಯಾಗು ವುದೆಂಬುದು ತಿಳಿಯದೇ? ದುಶ್ಶಾಸನನು ದ್ರೌಪದಿಯ ಹೆರಳನ್ನು ಹಿಡಿದು, ತನ್ನ ಕುಲವನ್ನು ನಾಶಮಾಡಿಕೊಂಡದ್ದು ನಿಮಗೆ ಗೊತ್ತಿಲ್ಲವೇ?

**ಕುಮತಿ:**— ಪರಸ್ತ್ರೀಯನ್ನು ಮುಟ್ಟಿದರೆ ನಾಶವಾಗುವಲ್ಲಿ ಏನೂ ಸಂದೇಹವಿಲ್ಲ. ಆದರೆ ನಿನ್ನ ಸಖಿಯು ಇನ್ನೂ ಕುಮಾರಿಯಾಗಿರುವಳಲ್ಲ!! ಎಂದಮೇಲೆ ಇವಳನ್ನು ಬಯಸುವುದು ಅನ್ಯಾಯವೇ ಹೇಳು. (ಎಂದು ನಗುತ್ತ) ಆದ್ದರಿಂದ ಕಮಲೇ! ಈ ಶರಣಾಗತನಾದ ನನ್ನನ್ನು ರಕ್ಷಿಸುವ ಭಾರವು ನಿನ್ನದೇ ಇರುವುದು. ರಮಣೀ!

**೮ ಪದ.** (ಧಾಟಿ:—ಜಾವು ಜಾವುರೆ ಸಾವಲಿಯಾ)

ತೋರೆಕರುಣವ ಬೇಗದೊಳು | ಸಾರಿಬಾರೆನೀರೆ || ಪ ||
ಅನುದಿನ ಜಗದೊಳಗನುನಯತೋರುತ |

ಮನುಜರಮನವನೆ ಭರದಲಿ ಸೆಳೆಯುತ | ಮಿನುಗುತ ನಳಿಯುವ ಸುಂದರನಾರಿ ಬಾರೆ || ೧ ||
ಮನಸಿಜನೆನ್ನನು ಬಳಲಿಸುತಿರುವನು | ಮನದೊಳು ನಿನ್ನನೆಬಯಸುತ ತೊಳಲುವೆ | ಮನಸಿಜಶರವನು ನೀಗುತ ಬೇಗನೆ ||೨||

(ಕಮಲೆಯು ತಿರಸ್ಕಾರದಿಂದ ಮುಖವನ್ನು ತಿರುಗಿಸುವಳು.) ಎಲೆ! ಇಷ್ಟು ಏಕೆ ಸಿಟ್ಟು? ಸುಂದರೀ! ಮುಖವನ್ನು ತಿರುಗಿಸು; ನಿನ್ನ ಮನೋಹರವಾದ ಕುಡಿನೋಟದಿಂದ ಒಮ್ಮೆಯಾದರೂ ನನ್ನನ್ನು ನೋಡಿ, ನನ್ನ ಮನಸ್ಸಿಗೆ ಆನಂದವನ್ನೀಯಬಾರದೇ?

**ಚಿತ್ರರೇಖೆ:**— ಸಖಿಯೇ! ಇನ್ನಿಲ್ಲಿರುವುದು ಸರಿಯಲ್ಲ. ಅರಮನೆಗೆ ಹೋಗುವ, ಶೀಘ್ರ ನಡೆ. ನೀನು ಕಮಲೆಯಾದ್ದರಿಂದ ಮಧುಪಗಳು ನಿನ್ನ ಹತ್ತಿರ ಬರುವುದು ಸೋಜಿಗವಲ್ಲ! ಈ ಕಾಮುಕನೆದುರಿಗೆ ನಿಂತರೆ ನಮ್ಮ ಮಾನವು ಹೋಗುವುದೇ ನಿಶ್ಚಯವು. ಕುಮತಿರಾಜನೇ! ನಿನ್ನ ಮನೋರಥವು ಪೂರ್ಣವಾಗದು, ನಮ್ಮ ಸಖಿಯು ಗೋಜಿಗೆ ಹೋಗ ಬೇಡ.

**ಕುಮತಿ:**— ಅಧಮಳೇ! ನೀನು ಯಾರ ಸಂಗಡ ಮಾತಾಡುವಿ. ನಾನು ದೊಡ್ಡ ರಾಜನಿರುವೆನು. ನನಗೆ ಮಾನವನ್ನು ಕೊಡುವುದು ನಿನ್ನ ಧರ್ಮವು. ಏಕವಚನದಿಂದ ಕರೆಯುವುದು ನಿನಗೆ ಯೋಗ್ಯವಲ್ಲ. ಕಂಡೆಯಾ?

**ಚಿತ್ರರೇಖೆ:**— ನೀತಿಯಿಂದ ನಡೆದವರಿಗೆ ಮಾನವು ದೊರೆಯುವುದು. ನೀತಿ ತಪ್ಪಿದವರಿಗೆ ಮಾನವು ಹೇಗೆ ದೊರೆಯುವುದು? ಇಲ್ಲಿಂದ ಹೋಗು. ನಿನ್ನ ಯೋಗ್ಯತೆಯು ಗೊತ್ತಾಯಿತು.

**ಕುಮತಿ:**— ಯಾಕೆ? ನಾನೇನು ಬಾಯಿ ಬೆದರಿಕೆಗೆ ಅಂಜುವವನೇ? ನಾನು ಗಂಡಸಿರುವೆನು, ಗಂಡಸು. ಮೂರ್ಖಳೇ! ಬಾಯಿಗೆ ಬಂದ ಹಾಗೆ ಬೊಗಳುವಿಯಾ? ದುಷ್ಟೇ! ರಾಜನಾದ ನನಗೆ ಈ ರೀತಿ ಅಪಮಾನ ಮಾಡುವಿಯೋ? ನಿಲ್ಲು ಅಧಮಳೇ! ಇಗೋ ಈ ಹದವಾದ ಬಾಣದ ಅಲಗನ್ನು ನಿನ್ನ ಹೃದಯಕ್ಕೆ ಚುಚ್ಚಿ, ನಿನ್ನನ್ನು ಯಮಸದನಕ್ಕೆ ಕಳಿಸುವೆನು. (ಎಂದು ಬಾಣವನ್ನು ಧನುಷ್ಯದಲ್ಲಿ ಹೂಡಲು,)

**ಚಿತ್ರರೇಖೆ**:—(ಕಮಲೆಯ ಹತ್ತಿರ ಓಡಿಹೋಗಿ ಭಯದಿಂದ ನಡುಗುತ್ತ) ಅಯ್ಯೋ!!! ಈ ನೀಚನು ನನ್ನನ್ನು ಕೊಲ್ಲದೆ ಬಿಡನು. ಕಮಲೇ! ರಕ್ಷಿಸು ರಕ್ಷಿಸು. (ಎಂದು ಕೂಗಿಕೊಳ್ಳುವಳು.)

**ಕಮಲೆ**:—ಚಿತ್ರರೇಖೇ! ಹೆದರಬೇಡ, ಇವನಾವ ದೊಡ್ಡ ವೀರನು? ಇಗೋ ನಾನೇ ಇವನ ಪಾರುಪತ್ಯವನ್ನು ಚನ್ನಾಗಿ ಮಾಡುವೆನು. (ಎಂದು ಬಿಲ್ಲಿನಲ್ಲಿ ಶರಸಂಧಾನವನ್ನು ಮಾಡಿ ಕುಮತಿಯ ಮೇಲೆ ಪ್ರಯೋಗವನ್ನು ಮಾಡಲು ಸಿದ್ಧಳಾಗುವಳು.)

**ಕುಮತಿ**:—(ಗಾಬರಿಯಾಗಿ ನಡಗುತ್ತ) ಅಯ್ಯೋ! ಇನ್ನೇನು ಮಾಡಲಿ! ಇವಳ ಮುಂದೆ ನನ್ನ ಆಟವೇ ಸಾಗುವಂತಿಲ್ಲ. ನನ್ನ ಧೈರ್ಯವೆಲ್ಲಾ ಅಳಿದು ಹೋಯಿತು. ಇಂಥ ಕಠಿನ ಪ್ರಸಂಗದಲ್ಲಿ ನಾನು ಇಲ್ಲಿ ನಿಲ್ಲದೆ, ಓಡಿಹೋಗುವುದೇ ವಿಹಿತವು. (ಎಂದು ಓಡುತ್ತಬಂದು ತನ್ನೊಳಗೆ) ಈ ಸಾರೆ ಈ ಪ್ರಯತ್ನವಂತೂ ಕೈಗೂಡಲಿಲ್ಲ, ಒಳ್ಳೇದು; ಇನ್ನೊಂದು ಸಾರೆ ಕೈಗೂಡಿದಾಗ ಪ್ರಯತ್ನ ಮಾಡಿನೋಡೋಣ. (ಎಂದು ಓಡಿಹೋಗುವನು.)

**ಚಿತ್ರರೇಖೆ**:—ಕಮಲೇ! ನೀನು ಇದ್ದದ್ದರಿಂದಲೇ ನನ್ನ ಪ್ರಾಣವು ಉಳಿಯಿತು. ನಿನ್ನಂತಹ ಶೂರಳೂ ಚತುರಳೂ ಧೈರ್ಯಶಾಲಿಯೂ ಯಾರೂ ಇಲ್ಲ.

**ಕಮಲೆ**:—ಈ ಪ್ರಶಂಸೆಗೆ ನಾನೇನು ಪಾತ್ರಳಲ್ಲ. ದೇವರೇ ನಮ್ಮ ಮೇಲೆ ಬಂದ ಸಂಕಟವನ್ನು ದೂರ ಮಾಡಿದನು. ನಾವು ಇನ್ನಿಲ್ಲಿರಬಾರದು. ಅದೋ! ಈ ಅರಣ್ಯದಾಚೆಗೆ ಕಾಣುವ ಕೇದಿಗೆಯ ಬನಕ್ಕೆ ಹೋಗಿ ಅಲ್ಲಿರುವ ಪಾರಿಜಾತ, ಮಧುಮಾಲತಿ, ಮಲ್ಲಿಕಾ ಮೊದಲಾದ ಹೂವುಗಳನ್ನೂ ಕೇದಿಗೆಗಳನ್ನೂ ದೇವರಿಗೋಸ್ಕರ ಹರಿದುಕೊಂಡು ಹೋಗುವ ಬನ್ನಿರಿ.

**ಗೆಳತಿಯರು**:—ನಡೆಯಿರಿ ಹಾಗಾದರೆ. (ಎಂದು ಎಲ್ಲರು ಹೊರಟು ಹೋಗುವರು.)



# ೩ನೆಯ ಪ್ರವೇಶವು.

## ಸ್ಥಳ:— ಕೇದಿಗೆಯ ಬನಕ್ಕೆ ಹೋಗುವ ಹಾದಿಯು.

### ಪಾತ್ರಗಳು:— ಕಮಲೆ, ಚಿತ್ರರೇಖೆ ಮತ್ತು ಕೋಕಿಲೆಯು.

ಬರುವ ರೀತಿಯು:— (ಚಿತ್ರರೇಖೆಯು ಮತ್ತು ಕೈಯಲ್ಲಿ ಬುಟ್ಟಿಯನ್ನು ಹಿಡಿದ ಕಮಲೆಯು ಬರುವರು.)

**ಕಮಲೆ:**—(ಚಿತ್ರರೇಖೆಯೊಡನೆ ಬಂದು) ಬೇಗ ಬನ್ನಿರಿ. ಹೀಗೆ ಮಾತಾಡುತ್ತ ಮೆಲ್ಲಮೆಲ್ಲನೆ ನಡೆದರೆ ಮುಂದೆ ನಮಗೆ ಅರಮನೆಗೆ ಹೋಗಲು ಹೊತ್ತಾಗುವುದು.

**ಚಿತ್ರರೇಖೆ:**—ಹೌದು ಇಗೋ ನೋಡು; ನಾನಂತೂ ನಿನ್ನ ಹತ್ತಿರ ದಿಂದಲೇ ಬರಹತ್ತಿರುವೆನು.

**ಕಮಲೆ:**—ಆದರೆ ಕೋಕಿಲೆಯು ಎಲ್ಲಿದ್ದಾಳೆ?

**ಚಿತ್ರರೇಖೆ:**—ಅವಳು ತುಸ ಹಿಂದೆ ಉಳಿದಿರುವಳು. ಈಗ ಬಂದಾಳು.

**ಕಮಲೆ:**—ಹಾಗಾದರೆ ನೀನು ಅವಳನ್ನು ಕರೆದುಕೊಂಡು ವನಕ್ಕೆ ಬಾ. ನಾನು ಅತ್ತಕಡೆಗೇ ಹೋಗುವೆನು. (ಎಂದು ಹೋಗುವಳು.)

**ಚಿತ್ರರೇಖೆ:**—ಒಳ್ಳೇದು, ಹಾಗೇ ಆಗಲಿ. (ಎಂದು ಎನ್ನುವಷ್ಟರಲ್ಲಿ ಕೋಕಿಲೆಯು ಬರುವುದನ್ನು ನೋಡಿ) ಕೋಕಿಲೇ! ಬಾ ಇಷ್ಟು ಹೊತ್ತು ಎಲ್ಲಿ ನಿಂತಿದ್ದೆ. ನನ್ನ ಸಖಿಯು ಕೇದಿಗೆಯ ವನಕ್ಕೆ ಹೋಗಿ ಬಹಳ ಹೊತ್ತಾಗಿದೆ. ಒಳ್ಳೇದು, ನೀನು ಅರಣ್ಯದಲ್ಲಿ ಏನು ನೋಡುತ್ತ ನಿಂತುಕೊಂಡಿದ್ದೆ?

**ಕೋಕಿಲೆ:**—ಒಂದು ಪಂಚವರ್ಣದ ಗಿಳಿಯು ತನ್ನ ಸಣ್ಣ ಮರಿಗೆ ಗುಟುಗು ಕೊಡುವುದನ್ನು ನೋಡುತ್ತ ನಿಂತುಕೊಂಡಿದ್ದೆನು. ಪಕ್ಷಿಗಳೂ ಕೂಡ ನಾವು ನಮ್ಮ ಮಕ್ಕಳ ಮೇಲೆ ಮಮತೆಯನ್ನು ಮಾಡುವಂತೆ ತಮ್ಮ ಮರಿಗಳಮೇಲೆ ಮಮತೆಯನ್ನು ಮಾಡುವುವು. (ಸಹ ಪ್ರೇಮವನ್ನು ಮಾಡುವುವು.)

**ಚಿತ್ರರೇಖೆ:**— ಇದರಲ್ಲಿ ಆಶ್ಚರ್ಯವೇನು? ಯಾವತ್ತೂ ಪ್ರಾಣಿಗಳು ತಮ್ಮ ಮಕ್ಕಳ ಮೇಲೆ ಪ್ರೇಮವನ್ನು ಮಾಡೇಮಾಡುವುವು. ಆದರೆ ಕೋಕಿಲೇ! ಕಮಲೆಯು ಇದೇ ನಮ್ಮೆದುರಿಗೆ ಕಾಣುವ ಕೇದಿಗೆಯ ಬನದಲ್ಲಿಯ ಹೂವುಗಳನ್ನೂ ಕೇದಿಗೆಗಳನ್ನೂ ದೇವರಿಗೋಸ್ಕರ ಹರಿದುಕೊಂಡು ಬರುವುದಕ್ಕೆ ಹೋಗಿರುವಳು. ನಾವೂ ಅತ್ತಕಡೆಗೆ ಹೋಗುವ ನಡೆ. (ಎಂದು ಹೊರಟುಹೋಗುವರು.)



# ೪ನೆಯ ಪ್ರವೇಶವು.

## ಸ್ಥಳ:— ಕೇದಿಗೆಯ ಬನವು.

**ಪಾತ್ರಗಳು:— ಕಮಲೆ, ಚಿತ್ರರೇಖೆ ಮತ್ತು ಕೋಕಿಲೆಯು.**

---

ಬರುವ ರೀತಿಯು:— (ಹೂವಿನ ಬುಟ್ಟಿಯನ್ನು ಹಿಡಿದ ಕಮಲೆಯು ಒಬ್ಬಳೇ ಬರುವಳು.)

**ಕಮಲೆ:**— (ಪ್ರವೇಶ ಮಾಡಿ ಹೂವುಗಳನ್ನು ಹರಿಯುತ್ತಿರುವಾಗ) ಇನ್ನೂ ನನ್ನ ಸಖಿಯರು ಏಕೆ ಬಂದಿರಲಿಕ್ಕಿಲ್ಲ! (ಎಂದು ತೆರೆಯ ಕಡೆ ನೋಡಿ, ಅವರು ಬರುವುದನ್ನು ನೋಡಿ) ಚಿತ್ರರೇಖೇ! ಕೋಕಿಲೆ! ಬನ್ನಿರೆ; ತಡವಾಗಿದೆ. ಆದಷ್ಟು ತೀವ್ರ ಹೂವುಗಳನ್ನು ಹರಿದುಕೊಂಡು ಅರಮನೆಗೆ ಹೋಗುವ.

**ಚಿತ್ರರೇಖೆ, ಕೋಕಿಲೆ** } ಕಮಲೇ! ಬಂದೆವು; ಬಂದೆವು. (ಎಂದು ಬರುವರು.)

**ಕಮಲೆ:**— ಗೆಳತಿಯರೇ! ನಾನು ಈ ದಿಕ್ಕಿಗೆ ಹೂವುಗಳನ್ನು ಹರಿಯುವುದಕ್ಕೆ ಹೋಗುವೆನು, ನೀವು ಬೇರೆ ಬೇರೆ ದಿಕ್ಕಿಗೆ ಹೋಗಿ ಅಲ್ಲಿರುವ ಉತ್ತಮವಾದ ಹೂವುಗಳನ್ನು ಹರಿದುಕೊಂಡು ಬನ್ನಿರಿ. ಹೂ! ನಿಲ್ಲಬೇಡರಿ; ಹೊತ್ತಾಗಿದೆ.

**ಚಿತ್ರರೇಖೆ, ಕೋಕಿಲೆ** } ನಿನ್ನ ಇಷ್ಟದಂತೆ ಆಗಲಿ (ಎಂದು ಹೂವುಗಳನ್ನು ಹರಿಯುವುದಕ್ಕೆ ಬೇರೆ ಬೇರೆ ದಿಕ್ಕಿಗೆ ಹೋಗುವರು.)

**ಚಿತ್ರರೇಖೆ:**—(ಹೂವುಗಳನ್ನು ಹರಿಯುತ್ತ ಹರಿಯುತ್ತ ಕೋಕಿಲೆಯ ಹತ್ತಿರ ಹೋಗಿ) ಕೋಕಿಲೇ! ಅಗೋ! ನಮ್ಮ ಪ್ರಿಯ ಸಖಿಯ ಕೈ ಬಣ್ಣವೂ ಕೇದಿಗೆಯ ಬಣ್ಣವೂ ಯಾವುದೆಂಬುದು ತಿಳಿಯದಂತಾಗಿದೆ; ನೋಡಿದೆಯಾ?

**ಕೋಕಿಲೆ:**—ತಿಳಿಯದೇ ಏನು? ಬಹು ಅಂದವಾದ ಸಂಜೆಗೆಂಪಿನ ಬಣ್ಣವನ್ನು ಹೋಲುವ ಉಗುರುಗಳಿಂದಲ್ಲವೆ ಅವಳ ಕೈ ಬಣ್ಣವನ್ನು ಗೊತ್ತು ಹಚ್ಚ ತಕ್ಕುದು.

**ಕಮಲೆ:**—ಕೋಕಿಲೇ! ನನ್ನನ್ನು ವರ್ಣಿಸುವುದು ಸಾಕುಮಾಡು. (ಎಂದು ಪುನಃ ಕೇದಿಗೆಗಳನ್ನು ಹರಿಯುತ್ತಿರುವಾಗ ಹಾವಿನ ಹೆಡೆಯು ಕೈಯಲ್ಲಿ ಸಿಗಲು ಹಿಂದಕ್ಕೆ ಸರಿದು) ಅವ್ವಯ್ಯಾ!! ಚಿತ್ರರೇಖೆ! ನಾನು ಕೇದಿಗೆಗಳನ್ನು ಹರಿಯುವಾಗ ನನ್ನ ಕೈಯಲ್ಲಿ ಹಾವಿನ ಹೆಡೆಯೇ ಬಂತು. ಹೆಡೆಯು ನನ್ನ ಕೈಯಲ್ಲಿ ಸಿಕ್ಕದ್ದು ನನ್ನ ಸುದೈವವೇ ಸರಿ. ಸಖಿಯರೇ! ಬೇಗನೇ ಹೋಗಿ ಆಯುಧಗಳನ್ನು ತೆಗೆದುಕೊಂಡು ಬನ್ನಿರಿ. ತುಸುತಡವಾದರೆ ಈ ಹಾವು ನನ್ನ ಮುಷ್ಟಿಯನ್ನು ಬಿಡಿಸಿಕೊಳ್ಳುವುದು. ಆಯುಧಗಳು! ಆಯುಧಗಳು! ಅಕೋ! ಆಗಿಡಕ್ಕೆ ತೂಗಹಾಕಿವೆ. ಹೂ! ತಡಮಾಡ ಬೇಡರಿ. ಇದು ನನ್ನ ಕೈಯನ್ನು ಬಿಗಿಯಹತ್ತಿದೆ. ತಂದು ಕೂಡಲೇ ಇದನ್ನು ಶೀಳಿ ಒಗೆಯುವೆನು.

**ಚಿತ್ರರೇಖೆ:**—ಅಯ್ಯೋ! ದೈವವೇ ಇಲ್ಲಿ ಯಾರಾದರೂ ಪುಣ್ಯಾತ್ಮರಿದ್ದರೆ ಈ ಸರ್ಪವನ್ನು ಕೊಲ್ಲಬಾರದೇ? (ಎಂದು ಸುತ್ತಲೂ ನೋಡುವಳು ಮತ್ತು ತನ್ನ ಕಡೆಗೆ ಧಾವಿಸುತ್ತ ಬರುವ ಹಂಸರಾಜನನ್ನು ನೋಡಿ ಭಯದಿಂದ) ಆ! ಇದೇನು ಆಗಲೇ ಓಡಿಹೋದ ಕುಮತಿರಾಜನು ಮತ್ತೆ ತಿರಿಗಿ ಬಂದನೋ! ಅಯ್ಯೋ! ಇನ್ನು ಮೇಲೆ ಮಾತ್ರ ನಮ್ಮ ಗತಿಯೇ ನೆಟ್ಟಗಾಗದು.

**ಕಮಲೆ:**—ಆ ಹೇಡಿಗೆ ಏಕೆ ಹೆದುರುವಿ? ಆಯುಧವನ್ನು ತೆಗೆದು ಕೊಂಡು ಬಾ.

**ಹಂಸರಾಜನು:**—(ಓಡುತ್ತ ಬಂದು) ಸುಂದರಿಯೇ! ಹೆದರಬೇಡ. (ಎಂದು ತನ್ನ ಖಡ್ಗದಿಂದ ಹಾವನ್ನು ಶೀಳಿ ದೂರ ಒಗೆಯುವನು. ಕಮಲೆಯು ತನ್ನ ಸಖಿಯರ ಹತ್ತಿರ ಹೋಗಿ ನಿಲ್ಲುವಳು.) ತರುಣೆಯರೇ!

ಹೆದರ ಬೇಡಿರಿ. ನಾನು ಕುಮತಿರಾಜನಲ್ಲ. ನಿಮ್ಮ ದೀನಸ್ವರವನ್ನು ಕೇಳಿದ ಕೂಡಲೇ ಧಾವಿಸುತ್ತ ನಾನು ಇಲ್ಲಿಯ ವರೆಗೆ ಬಂದೆನು. ಈಗ ನಿಮ್ಮೆಲ್ಲರ ಭಯವು ದೂರಾಯಿತೇ?

**ಕೋಕಿಲೆ:**— ಆಯಿತು. ನಿಮ್ಮಂತಹ ಶೂರರಿದ್ದ ಮೇಲೆ ನಮ್ಮ ಮೇಲೆ ಬಂದ ಸಂಕಟವು ದೂರಾಗದಿರುವುದೇ? ನಿಮ್ಮ ಉಪಕಾರವು ನಮ್ಮ ಮೇಲೆ ಬಹಳವಾಯಿತು.

**ಹಂಸರಾಜ:**— ನಾನು ಮಾಡತಕ್ಕ ಕರ್ತವ್ಯವನ್ನೇ ಮಾಡಿದೆನು. ಇದರಲ್ಲಿ ಉಪಕಾರವೇನು?

**ಕಮಲೆ:**— (ಹಂಸರಾಜನನ್ನು ಓರೆಗಣ್ಣಿನಿಂದ ನೋಡುತ್ತ ಕೋಕಿಲೆಗೆ) ಸಖಿಯೇ! ಈ ತರುಣ ರಾಜಪುತ್ರನ ರೂಪವು ಎಷ್ಟು ಮನೋಹರವಾಗಿದೆ ನೋಡಿದೆಯಾ?

**೯ ಪದ.** ರಾಗ:—(ಸಿಂಧುರಾ ತಾಲ ದೀಪಚಂದ.)

ಧಾಟಿ:—(**आला जो मज प्रेमे वराया**)

ಜಾಣೇ ಈ ಮನಮೋಹನ ತಾ ಮಾರರೂಪಾ |
ಕಾಣುವನೇ ನಿರುತಾ ಸಖಿ ನೋಡೇ || ಪ ||
ಮರುಳನಾಗೇ ಮೃಗಾಂಕ ವಿಮಲಾ |
ಸೊರಗುವನಳಿನ ಮುಖ ನೋಡುತ ತಾ || ೧ ||

**ಕೋಕಿಲೆ:**— ಆದಿರಲಿ. (ಹಂಸರಾಜನಿಗೆ) ನಿಮ್ಮ ಉಪಕಾರಕ್ಕೆ ನಮ್ಮಿಂದ ಏನು ಮಾಡಲಾದೀತು?

**ಹಂಸರಾಜ:**— ಆ ವಿಷಯವಾಗಿ ಚರ್ಚೆಯೇ ಬೇಡ. ನಿಜವಾಗಿ ಪ್ರಜೆಗಳನ್ನು ಕಾಪಾಡುವುದೂ, ವೈರಿಗಳನ್ನು ಕೊಲ್ಲುವುದೂ ನಮ್ಮ ಕ್ಷತ್ರಿಯ ಧರ್ಮವಾಗಿದೆ. (ಸ್ವಲ್ಪ ನೆನಪಿಗೆ ತಂದು) ಅದಿರಲಿ, ಕೋಟೆಯನ್ನು ವಶಮಾಡಿಕೊಳ್ಳುವುದಕ್ಕೆ ಹೋದ ನಮ್ಮ ಸೈನ್ಯವು, ನಾನು ಬರುವ ಹಾದಿಯನ್ನೇ ನೋಡುತ್ತಿರಬಹುದು. ಆದ್ದರಿಂದ ನೀವು ನಿಮ್ಮ ನಗರದ ಕಡೆಗೆ ನಡೆಯಿರಿ. ಇನ್ನು ನಾನು ಛಾವಣಿಗೆ ಹೋಗುವೆನು.

**ಕಮಲೆ:**— (ತನ್ನೊಳಗೆ) ಇವರು ಶೂರರೂ ಚೆಲುವರೂ ಆಗಿರುವರು. ಇವರ ಮೋಹನ ರೂಪವು ನನ್ನ ಮನಸ್ಸನ್ನು ತನ್ನ ಕಡೆಗೆ ಎಳೆಯಹತ್ತಿದೆ. ಹಾಗೂ ನನ್ನ ಮನಸ್ಸು ಇವರೊಡನೆ ಮಾತಾಡಲು ಹವಣಿಸುತ್ತದೆ. ಏನು ಮಾಡಲಿ? ನಾಚಿಕೆಯು ಅಡ್ಡಬರುವುದು. (ಎಂದು ಸುಮ್ಮಗಾಗುವಳು.)

**ಹಂಸರಾಜ:**— ನನಗೆ ಹೋಗಲು ಅಪ್ಪಣೆಯನ್ನು ಕೊಡಿರಿ.

**ಕೋಕಿಲೆ:**— ಇಷ್ಟು ಅವಸರವೇಕೆ? ಸ್ವಲ್ಪ ಸಮಯ ಇಲ್ಲಿಯೇ ವಿಶ್ರಮಿಸಿಗೊಂಡಮೇಲೆ ತಮ್ಮ ಸ್ಥಳಕ್ಕೆ ಹೋಗಬಹುದು. ನಮ್ಮ ಮನಸ್ಸಿನ ಬಯಕೆಯನ್ನು ಪೂರ್ಣ ಮಾಡಿದರೆ ನಮಗೆ ಬಹು ಸಂತೋಷವಾಗುವುದು.

**ಹಂಸರಾಜ:**— ಹಾಗೇ ಆಗಲಿ. (ಎಂದು ಕುಳಿತುಕೊಂಡು) ಸುಂದರಿಯರೇ! ನೀವೂ ಕುಳಿತುಕೊಳ್ಳಿರಿ. ನೀವು ನಿಂತುಕೊಂಡಿದ್ದರೆ ನನ್ನ ಮನಸ್ಸಿಗೆ ಸಮಾಧಾನವಾಗದು.

**ಕೋಕಿಲೆ:**—
**ಚಿತ್ರರೇಖೆ:**— } ತಮ್ಮ ಇಷ್ಟದಂತೆಯಾಗಲಿ (ಎಂದು ಎಲ್ಲರು ಕುಳಿತುಕೊಳ್ಳುವರು.)

**ಕೋಕಿಲೆ:**— (ತನ್ನೊಳಗೆ) ನನ್ನ ಗೆಳತಿಯು ಈ ಸುಂದರಾಂಗನನ್ನು ಓರೆನೋಟದಿಂದ ನೋಡಹತ್ತಿರುವಳು. ಈ ಮಹಾನುಭಾವನೇ ನನ್ನ ಪ್ರಿಯಸಖಿಗೆ ಯೋಗ್ಯನಾದ ವರನು. ಎಂದಮೇಲೆ ಇವನ ಪಟ್ಟದರಸಿಯ ಹೆಸರನ್ನೂ ಇವನ ವಾಸಸ್ಥಳವನ್ನೂ ತಿಳಿದುಕೊಳ್ಳುವುದು ಅವಶ್ಯವು. (ಪ್ರಕಟವಾಗಿ) ರಾಜನ್! ತಮ್ಮ ದೇಶವು ಯಾವುದು ಮತ್ತು ತಮ್ಮ ಹೆಸರೇನು?

**ಹಂಸರಾಜ:**— ನಾನು ಹಸ್ತಿನಾವತಿಯ ಹಂಸರಾಜನು.

**ಕೋಕಿಲೆ:**— ತಮ್ಮ ವಿಯೋಗತಾಪವನ್ನು ಸಹಿಸದೆ ದುಃಖಿಸುವವಳು ಯಾರು?

**ಹಂಸರಾಜ:**— (ತನ್ನೊಳಗೆ) ಈಕೆಯು ಚತುರಳಿದ್ದಾಳೆ. ಇವಳು ನನ್ನ ಪತ್ನಿಯ ಹೆಸರನ್ನು ತಿಳಿದುಕೊಳ್ಳುವುದಕ್ಕಾಗಿ ಈ ಚತುರಪ್ರಶ್ನೆಯನ್ನು ಮಾಡಿರಬಹುದು. ನಾನಾದರೂ ಇವಳಿಗೆ ಸಮರ್ಪಕವಾಗುವಂತೆ ಉತ್ತರವನ್ನೇ ಕೊಡುವೆನು. (ಪ್ರಕಟವಾಗಿ) ಚತುರಿಯೇ! ನನ್ನ ಸಲುವಾಗಿ ದುಃಖಿಸುವ ರವು

ಣಿಯು ಈ ಖಡ್ಗವೇ ಆಗಿದೆ. ಇವಳೇ ನನ್ನ ಪ್ರಿಯ ಪತ್ನಿಯು. ಇವಳೊಡನೆ ಆನಂದದಿಂದ ಕ್ರೀಡಿಸುವ ರಾಜರೇ ಕೀರ್ತಿಯನ್ನು ಸಂಪಾದಿಸುವರು. ಉಳಿದವರು ಜನರ ನಿಂದೆಗೆ ಒಳಗಾಗುವರು. ಚಲುವೆಯರೇ! ಯುದ್ಧದಲ್ಲಿ ಹೋರಾಡುವ ವೀರರಿಗಾಗುವ ಆನಂದವು ಹೇಡಿಗಳಿಗೆ ಹೇಗೆ ಗೊತ್ತಾಗುವುದು? ರಣದಲ್ಲಿ ಗೆದ್ದು ವೀರ ಶ್ರೀಯಳ ಕಡೆಯಿಂದ ಮಾಲೆಯನ್ನು ಹಾಕಿಸಿಕೊಳ್ಳುವ ರಾಜರೇ ರಾಜರು. ಕೋಕಿಲೇ! ಶೌರ್ಯದ ಮಹಿಮೆಯನ್ನು ಎಷ್ಟೆಂತ ವರ್ಣಿಸಲಿ. ಅಹಹ!!!

೧೦ ಪದ. ಧಾಟಿ:—(मोरि कर पकरत गई)

ರಣ ಸುರರಸದನಸಮು ನಿರುತಾ | ಜನಮನ ತಾ ವಲಿಸುತ |
ಗುಣಯುತ ರಣರತರಿಗೆ ವರಪದ ಕೊಡುವುದೆ ತಿಳಿರಣತಾ
|| ಪ ||
ಚಾರುವದನೆ ರಣದಿ ಸತತನಲೆದೀ | ಧರಣಿತಲದಿ ಮೆರೆವಾ |
ನರರಿಗೀ ರಾಜ್ಯಯೋಗ ಸಕಲ ಧನವು | ದೊರೆಯುವುವೆಸದಾ
|| ೧ ||

ಇನ್ನಾದರೂ ನನಗೆ ಹೋಗಲು ಅಪ್ಪಣೆಯನ್ನು ಕೊಡಿರಿ.

**ಕೋಕಿಲೆ:**—(ಹಂಸರಾಜನನ್ನು ಓರೆನೋಟದಿಂದ ನೋಡುತ್ತಿರುವ ಕಮಲೆಗೆ) ಕಮಲೇ! ಹಂಸರಾಜನಿಗೆ ಹೋಗಲು ಅಪ್ಪಣೆಯನ್ನು ಕೊಡು.

**ಕಮಲೆ:**—ಇವರಿಗೆ ಅಪ್ಪಣೆಯನ್ನು ಮಾಡಲು ನಾನೆಷ್ಟರವಳು. (ಎಂದು ಮುಗುಳು ನಗೆಯಿಂದ ನಗುತ್ತ) (ತನ್ನೊಳಗೆ) ಇಂತಹ ಗುಣಿಯು ವಿಯೋಗವನ್ನು ಸಹಿಸುವುದಾದರೂ ಹೇಗೆ? ಇವರು ಮಾಡಿದ ಉಪಕಾರವನ್ನು ತೀರಿಸುವುದು ಹೇಗೆ? ನನ್ನಿಂದ ಎಂದಿಗೂ ಆಗದ ಕೆಲಸವು ಹಾಗೂ ನನ್ನ ಮನಸ್ಸು ಇವರ ಕಡೆಗೆ ನನ್ನನ್ನು ಎಳೆಯುವುದು. ಆದರೆ ಈಗ ನನ್ನ ಮನೋರಥವನ್ನು ಇವರಿಗೆ ತಿಳಿಸುವುದಾದರೂ ಹೇಗೆ? (ಪ್ರಕಟವಾಗಿ) ಕೋಕಿಲೇ! ಉಪಕಾರ ಮಾಡಿದ ವೀರಪುರುಷರಿಗೆ ಆದರಸತ್ಕಾರವನ್ನು ಮಾಡದೆ

ಹಾಗೇ ಕಳಿಸುವುದು ನ್ಯಾಯವೇ?

**ಹಂಸರಾಜ:**— ನಾನೇನು ಉಪಕಾರ ಮಾಡಿದ್ದು?

**ಕಮಲೆ:**— (ನಗುತ್ತ ವಿನಯದಿಂದ,) ಸಜ್ಜನರು ತಾವು ಮಾಡಿದ ಕೃತ್ಯವು ಉತ್ತಮವೆಂದು ಎಂದಿಗೂ ಸ್ಪಷ್ಟವಾಗಿ ಹೇಳರು. ಏನೇ ಇರಲಿ; ನಾವು ಮಾಡುವ ಆದರಸತ್ಕಾರವನ್ನು ದಯಮಾಡಿ ಸ್ವೀಕರಿಸಬೇಕು.

**ಕೋಕಿಲೆ:**— ಮೊದಲು ನಿಮ್ಮೊಡನೆ ಭಯವಿಲ್ಲದೆ ಮಾತಾಡಿದ್ದಕ್ಕೆ ನನ್ನನ್ನೇ ನೀವು ಕ್ಷಮಿಸರಿ.

**ಹಂಸರಾಜ:**— ತರುಣಿಯರೇ! ನಿಮ್ಮ ಮಧುರ ನುಡಿಗಳನ್ನು ಕೇಳಿ ನನಗೆ ಆನಂದವಾಯಿತು. ಇನ್ನು ಬೇರೆ ಆದರಸತ್ಕಾರವೇತಕ್ಕೆ? ನೀನು ನನ್ನ ಕ್ಷಮೆಯನ್ನು ಬೇಡುವುದಂತೂ ಇರಲಿ. ನಾನು ನಿಮ್ಮ ರಾಜಪುತ್ರಿಯ ಕರವನ್ನು ಹಿಡಿದದ್ದಕ್ಕೆ ನೀವೆಲ್ಲರೂ ನನ್ನನ್ನೇ ಕ್ಷಮಿಸತಕ್ಕುದು.

**ಕೋಕಿಲೆ:**— ಸಂಕಟದಲ್ಲಿದ್ದ ತರುಣಿಯರ ರಕ್ಷಣೆಗಾಗಿ ಅವಳ ಕೈ ಹಿಡಿದ ಪುರುಷರು ನಿರ್ದೋಷಿಗಳೆಂದು ಧರ್ಮದಿಂದ ಸಿದ್ಧವಾಗುವುದು. ಎಂದ ಮೇಲೆ ನೀವು ನಮ್ಮ ಕ್ಷಮೆಯನ್ನು ಬೇಡುವ ಆಸ್ಪದವೇ ಉಳಿಯಲಿಲ್ಲ.

**ಹಂಸರಾಜ:**— ನೀನು ಹೇಳುವುದೆಲ್ಲ ನಿಜವು. ಆದರೂ ಕರಸ್ಪರ್ಶವನ್ನು ಮಾಡಿದ್ದು ಅನ್ಯಾಯವಲ್ಲವೇ?

**ಕೋಕಿಲೆ:**— ನೀವು ನನ್ನ ಸಖಿಯ ಕರವನ್ನು ಹಿಡಿದಿರಿ; ಪಾಣಿಗ್ರಹಣಮಾಡಿದ್ದರೆ ಒಳಿತಾಗುತ್ತಿತ್ತು. ಕಮಲೇ! ನಾನು ಹೇಳಿದ್ದು ನಿನ್ನ ಮನಸ್ಸಿಗೆ ವಿರುದ್ಧವಾಯಿತೇ ಹೇಗೆ?

**ಕಮಲೆ:**— (ತನ್ನೊಳಗೆ) ನನ್ನ ಪ್ರಿಯ ಸಖಿಯು ನಾನು ಹೇಳಬೇಕೆಂದಿದ್ದುದನ್ನೇ ಹೇಳಿದಳು. ಈಗ ನನ್ನ ಅಭಿಪ್ರಾಯವನ್ನು ಮನೋವಿಕಾರಗಳಿಂದ ಹೊರಗೆಡುವುದು ಸರಿಯಲ್ಲ. (ಎಂದು ಪ್ರಕಟವಾಗಿ ಹುಬ್ಬುಗಂಟಿಕ್ಕಿ) ಕೋಕಿಲೇ! ಏನು ಹೇಳಿವೆ? ಚೇಷ್ಟೆಯನ್ನು ಮಾಡಬೇಡ.

**ಕೋಕಿಲೆ:**— ನಾನೇನು ಚೇಷ್ಟೆಮಾಡುವವಳಲ್ಲ. ನನ್ನ ನುಡಿಯು ಸತ್ಯವಾಗುವುದು ತಿಳಿದಿರಲಿ.

**ಹಂಸರಾಜ:**— ಕೋಕಿಲೇ! ನಾನು ನಿನ್ನ ಪ್ರಿಯ ಸಖಿಯನ್ನು ಪರಿ

ಸಲು ಯೋಗ್ಯನಲ್ಲ.

**ಕೋಕಿಲೆ:**—ತಮ್ಮಂಥ ಸುಂದರ ಪುರುಷರ ಕೈಯನ್ನು ಹಿಡಿಯಲು ಯಾವ ತರುಣಿಯು ಬಯಸಳು. ಮೇಲಾಗಿ ತಾವು ಗುಣಿಗಳೂ ಉದಾರರೂ ಚತುರರೂ ಆಗಿರುವಿರಿ.

**ಹಂಸರಾಜ:**—ಕೋಕಿಲೇ! ನನ್ನನ್ನು ವರ್ಣಿಸುವ ಶ್ರಮವನ್ನು ತೆಗೆದುಕೊಳ್ಳಬೇಡ. ಯಾಕಂದರೆ ನಿಮ್ಮ ಸಖಿಯು ಸೌಂದರ್ಯದಲ್ಲಿ ಎಲ್ಲರಿಗೂ ಮಿಗಿಲಾಗಿರುವಳು. ಹಾಗೂ ಇವಳ ಮುಖವು ಚಂದ್ರಕಾಂತಿಯನ್ನು ಜರೆಯುವುದು. ಹೇಗಂದರೆ,

(ರಾಗ ಹಮೀರ ಕಲ್ಯಾಣ)

**೧೧ ಪದ.** ಧಾಟಿ:— (अधर विमल निकटि मोह हा पापी)

ಚೆಲುವಶಶಿಯುಗಗನಕೇರಿದಾ ತಾನೀ ।
ನಳಿನವದನವನ್ನು ನೋಡಿ ॥ ಪ ॥
ನರರಾನಂದದೊಳೋಡುವರಲಿಯು ।
ತೆರದೆ ಮನೋಹರ ಕಮಲ ಮುಖಕೆ ॥ ೧ ॥

**ಕೋಕಿಲೆ:**—ಏನು ಹೇಳುವುದು. ನಿಮ್ಮ ವಿಚಾರ ಶಕ್ತಿಗೆ ಎಣೆಯೇ ಇಲ್ಲ. ಏನೇ ಇರಲಿ, ನಮ್ಮ ಪ್ರಿಯ ಸಖಿಯ ಸ್ವಯಂವರಕ್ಕೆ ನೀವು ತಪ್ಪದೇ ಬರಬೇಕೆಂಬುವುದೇ ತಮಗೆ ನಮ್ಮ ಬಿನ್ನಹವದೆ. ಸ್ವಯಂವರವು ವೈಶಾಖ ಶುದ್ಧ ಪಂಚಮಿ ದಿವಸ ಇರುವುದು.

**ಹಂಸರಾಜ:**—ನಿಮ್ಮ ಇಷ್ಟದಂತೆಯಾಗಲಿ. ಇನ್ನು ನಾನು ನನ್ನ ಸ್ಥಳಕ್ಕೆ ಹೋಗುವೆನು. ನೀವು ಅರಮನೆಗೆ ತೆರಳಿರಿ.

**ಕಮಲೆ:**—(ತನ್ನೊಳಗೆ) ಇವರೊಡನೆ ಹೇಗೆ ಮಾತಾಡಲಿ? (ಎಂದು ನಾಚುತ್ತ ಬಂದು ಪ್ರಕಟವಾಗಿ) ಈ ದೀನದಾಸಿಯ ಮೇಲೆ ದಯವಿರಲಿ. (ಎಂದು ಹೂವುಗಳನ್ನು ಕೊಡುವಳು.)

**ಹಂಸರಾಜ:**—(ಹೂವುಗಳನ್ನು ಸ್ವೀಕರಿಸಿ) ಛೀಃ ಛೀಃ ನಿಮ್ಮೆಲ್ಲರನ್ನು ಮರೆಯುವುದು ಎಂದಾದರೂ ನನ್ನಿಂದಾದೀತೇ? ಹೋಗಿಬರುವೆನು. (ಎಂದು

ಮುಂದಕ್ಕೆ ಬಂದು ತನ್ನೊಳಗೆ) ಈ ಸುಂದರಾಂಗಿಯು ಓರೆಗಣ್ಣಿನ ನೋಟವು ವೀರನಾದ ನನ್ನ ಹೃದಯಕ್ಕೆ ಎಷ್ಟು ತಾಪವನ್ನು ಕೊಡುವುದಲ್ಲ! ಅಹಹ!!! ಏನು ಮನೋಹರ ಕಟಾಕ್ಷವಿದು? ನನ್ನ ಪ್ರೇಮವು ಈ ಸುಂದರಿಯ ಮೇಲೆ ಇದ್ದಂತೆ ಇವಳ ಪ್ರೇಮವು ಸಹ ನನ್ನ ಮೇಲದೆ ಎಂಬುದಕ್ಕೆ ಈ ಹೂವುಗಳೂ ಓರೆನೋಟವೂ ಸಾಕ್ಷಿಯಾಗಿವೆ. (ಸ್ವಲ್ಪ ವಿಚಾರಿಸಿ) ಒಳ್ಳೇದು; ಈ ದಿವ್ಯರತ್ನವನ್ನು ಇಲ್ಲಿಯೇ ಹೇಗೆ ಬಿಟ್ಟು ಹೋಗುವುದು? ಏನೇ ಇರಲಿ; ಈಗ ಇಲ್ಲಿಂದ ಹೋಗುವುದೇ ನೆಟ್ಟಗೆ. (ಎಂದು ಹೊರಟುಹೋಗುವನು.)

**ಚಿತ್ರರೇಖೆ**:—(ಹಂಸರಾಜನು ಹೋದ ಮಾರ್ಗವನ್ನು ನೋಡುತ್ತ ನಿಂತಿರುವ ಕಮಲೆಗೆ) ಕಮಲೇ! ಇದೇನು? ನಡೆ; ಇನ್ನು ಮನೆಗೆ ಹೋಗುವ.

**ಕಮಲೆ**:—(ತನ್ನೊಳಗೆ) ಪ್ರಾಣಸಖಿಯರೊಡನೆ ಏಕೆ ಮರೆಮಾಚಲಿ? (ಪ್ರಕಟವಾಗಿ) ಸಖಿಯೇ! ಹಂಸರಾಜನು ನನ್ನ ಮನಸ್ಸನ್ನು ಸಂಪೂರ್ಣ ಹರಣ ಮಾಡಿಬಿಟ್ಟಿರುವನು. ಆ ಮಹಾತ್ಮನೇ ನನ್ನ ಮನೋಹರನು. ಅವನ ಸೌಂದರ್ಯವನ್ನು ಬಣ್ಣಿಸುವುದು ನನ್ನಂಥ ಅಬಲೆಯ ಕಡೆಯಿಂದ ಎಂದಿಗೂ ಆಗದು, ಆಹಾ!!! ಏನು ಅವನ ಲಾವಣ್ಯವು.

**೧೨ ಪದ**: ಧಾಟಿ.- ಕಡು ಮೋಹವ ತಾಳ್ದೆ.

ಮನತೋಷವತಾಳ್ದೆ | ವನಜಾಕ್ಷನೋಳು ನಾ |
ಮನವೆ ನೋಡಲು ಪೋಪುದೆ | ಮನಮೋಹನಾಂಗನಾ || ಪ ||
ಮನವನ್ನೆಗೆಲ್ದು ಸುಂದರಾ | ಎನ್ನ ಮನದ ಚಂದಿರಾ |
ನನದಿಎನ್ನ ಇಂದಿರಾ | ನಯನಗಳರಳಿಸಿದನೆ || ೧ ||
ಕಡು ಮೋದವಾ ಬೀರುತಾ | ಬಿಡದಲೆನ್ನ ಮುಖವನೇ |
ಕಡೆಗಣ್ಣಿನಿಂದ ನೋಡುತಾ | ಸಡಗರದಲಿ ನಡೆದನೆ || ೨ ||

**ಚಿತ್ರರೇಖೆ**:— ಇರಲಿ; ಸಖಿಯರೇ! ಇನ್ನು ಮನೆಗೆ ಹೋಗುವ, ನಡೆಯಿರಿ (ಎಂದು ಅವರೊಡನೆ ಹೊರಟು ಹೋಗುವಳು.)



# ೫ನೇ ಪ್ರವೇಶವು.

## ಸ್ಥಳ:— (ಕಿಲ್ಲೆಯ ಕಡೆಗೆ ಹೋಗುವ ಹಾದಿಯು.)

ಪಾತ್ರಗಳು:— **ಹಂಸರಾಜ ಮತ್ತು ವೀರಸೇನ.**

---

**ವೀರಸೇನ:**—(ಒಬ್ಬನೇ ಪ್ರವೇಶಮಾಡಿ) ಹಂಸರಾಜನು ಎಲ್ಲಿಗೆ ಹೋಗಿರಬಹುದು? ನಾನು ಸ್ವಲ್ಪ ಹಿಂದೆ ಉಳಿದ ಕೂಡಲೇ ಮರೆಯಾದವನು ಸೂರ್ಯಾಸ್ತವಾಗಿ ಚಂದ್ರೋದಯವಾದರೂ ನನ್ನ ದೃಷ್ಟಿಗೆ ಬೀಳಲೊಲ್ಲನು. (ಎಂದು ಎನ್ನುವಷ್ಟರಲ್ಲಿ ಹಂಸರಾಜನು ಪ್ರವೇಶಮಾಡಿ)

**ಹಂಸರಾಜ:**—ವೀರಸೇನಾ! ಹೊತ್ತಾಗಿದೆ. ನಮ್ಮ ಛಾವಣಿಯ ಕಡೆಗೆ ಹೋಗುವ, ನಡೆ.

**ವೀರಸೇನ:**—ಒಳ್ಳೇದು, ಮಿತ್ರಾ! ನೀನು ಇಷ್ಟು ಹೊತ್ತಿನವರೆಗೆ ಎಲ್ಲಿ ಇದ್ದೆ? ಈ ರೀತಿ ವಿಲಂಬಮಾಡಿದರೆ ಯುದ್ಧಕಾರ್ಯವು ಕೆಟ್ಟುಹೋಗುವುದಲ್ಲಾ.

**ಹಂಸರಾಜ:**—ನಾನು ಹಾವಿನ ಬಾಧೆಯುನ್ನು ತಾಳದೆ ಬಳಲುವ ಒಬ್ಬ ತರುಣಿಯುಳ ಕರುಣಸ್ವರವನ್ನು ಕೇಳಿ, ಅವಳ ರಕ್ಷಣೆಗಾಗಿ ಅತ್ತಕಡೆಗೆ ಹೋಗಿದ್ದೆನು. ಹಾಗೂ ಅವಳ ಮೇಲೆ ಬಂದ ಸಂಕಟವನ್ನು ದೂರಮಾಡಿ, ಇಲ್ಲಿಗೆ ಬರಬೇಕಾದರೆ ಸೂರ್ಯಾಸ್ತವಾಯಿತು. ಇನ್ನು ಛಾವಣಿಯ ಕಡೆಗೆ ಹೋಗುವ, ನಡೆ.

**ವೀರಸೇನ:**—ಮಿತ್ರಾ! ದೇವರು ನಿನ್ನ ಕಲ್ಯಾಣವನ್ನು ಮಾಡಲಿ! ಈ ಜಗತ್ತಿನಲ್ಲಿ ಉತ್ತಮಕಾರ್ಯಕ್ಕೆ ಉತ್ತಮ ಫಲವು ದೊರೆಯುವುದು. ಒಳ್ಳೇದು; ರಜನಿನಾಥನಾದ ಚಂದ್ರನು ನಕ್ಷತ್ರಗಳ ಮಧ್ಯದಲ್ಲಿ ಎಷ್ಟು ಚೆಂದ ಕಾಣುವನು ನೋಡು.

**ಹಂಸರಾಜ:**—ಸಖನೇ! ಆಕಾಶದಲ್ಲಿ ಹೊಳೆಯುವ ಚಿಕ್ಕೆಗಳು ನಕ್ಷತ್ರಗಳಲ್ಲ. ಮಧ್ಯದಲ್ಲಿ ಹೊಳೆಯುವವನು ಚಂದ್ರನಲ್ಲ.

**ವೀರಸೇನ:**—ಹಾಗಾದರೆ ಏನಿವು?

**ಹಂಸರಾಜ:**—ಮಿತ್ರಾ!

ರಾಗ: ಕಾನಡಾ.

**೧೩ ಪದ:**—ಧಾಟಿ: **(रजनिनाथ हा नभी उगवला)**

ಮನಕೆಮೋದಬೀರ್ವನೀ ಶಶಿಯುತಾ | ಕನ್ನಡಿಯೇ
ಜಗದೇವಿಗೆ ನಿರುತಾ || ಪ ||
ಮರೆಯದಲೇ ಈಜಗಪಾಲಿಸುತಿಹ |
ಧರಣಿಯನೇ ನೋಡುವ | ವರಸುರ ಲೋಕದ |
ಸುರವೃಂದವೆ ಇದುಸಖನೇ ತಿಳಿಯೋ | ತಾರಾ
ಮಾಲೆಗಳಲ್ಲವಯ್ಯಾ || ೧ ||

**ಎಲ್ಲರೂ ಹೋಗುವರು.**

೧ನೆಯ ಅಂಕವು ಮುಗಿದುದು.

|| ಓಂ ||

|| श्रीराम ||

# ೨ನೆಯ ಅಂಕ.

## ೧ನೆಯ ಪ್ರವೇಶವು.

ಸ್ಥಳ:—ಹಂಸರಾಜನ ಅರಮನೆಯ ಒಂದು ಭಾಗವು.

ಪಾತ್ರಗಳು:—**ಹಂಸರಾಜ, ವೀರಸೇನ, ಮತ್ತು ದೂತನು.**

ಬರುವ ರೀತಿಯು:—(ಬಿಳೀ ಉಡುಪುಗಳನ್ನು ಧರಿಸಿದ ಹಂಸರಾಜನು ಒಬ್ಬನೇ ಆಸನದ ಮೇಲೆ ಕುಳಿತಿರುವನು.)

**ಹಂಸರಾಜ:**—(ತನ್ನೊಳಗೆ) ನಾನು ಆ ತರುಣೀಮಣಿಯ ಮೋಹ ಪಾಶಕ್ಕೆ ಒಳಗಾಗಿ ಸ್ವಯಂವರಕ್ಕೆ ಬರುತ್ತೇನೆಂದು ವಚನಕೊಟ್ಟದ್ದು ಏನೂ ವಿಹಿತವಾಗಲಿಲ್ಲ! ಯಾಕಂದರೆ, ಚಂಪಕನಗರಕ್ಕೆ ಅಧಿಪತಿಯಾದ ಚಂದ್ರಶೇಖರನು ನಮ್ಮ ಕಡುವೈರಿಯಾಗಿರುವನು. ಹೀಗಿರುವುದರಿಂದ ಅವನ ರಾಜ್ಯದೊಳಗೆ ಅಂಗರಕ್ಷಕರಿಲ್ಲದೆ ಓರ್ವನೇ ಹೋಗುವುದು ಉಚಿತವಾದ ಕಾರ್ಯವೆಂದು ಕಾಣುವುದಿಲ್ಲ. ನನ್ನ ಪ್ರಿಯ ಮಿತ್ರನಾದ ವೀರಸೇನನನ್ನು ಸಂಗಡ ಕರೆದುಕೊಂಡುಹೋದರೆ ಯಾವ ತರದ ಗಂಡಾಂತರಕ್ಕೂ ಅಂಜುವ ಕಾರಣವಿಲ್ಲ. ವಿಚಾರಮಾಡದೆ ವಚನಕೊಡುವವರು ಸಂಕಟಕ್ಕೆ ಗುರಿಯಾಗುವುದು ನಿಶ್ಚಯವು. ಏನೇ ಆಗಲಿ, ತರುಣಿಯರಿಗೆ ಕೊಟ್ಟ ವಚನವನ್ನೇ ಪಾಲಿಸುವುದು ನನಗೆ ಹೆಚ್ಚು ಭೂಷಣವು.

**ದೂತನು:**—(ಪ್ರವೇಶಮಾಡಿ) ಮಹಾಸ್ವಾಮಿ! ವೀರಸೇನ ಮಹಾರಾಯರು ಬಂದಿರುವರು.

**ಹಸಂರಾಜ:**— ಹಾಗಾದರೆ, ಅವರನ್ನು ತಡಮಾಡದೆ ಇಲ್ಲಿಗೆ ಬರ ಮಾಡು.

**ದೂತನು:**— ಅಪ್ಪಣೆ. (ಎಂದು ಹೋಗುವನು.)

**ಹಂಸರಾಜ:**— (ಗೆಳೆಯನು ಬರುವುದನ್ನು ನೋಡಿ, ಎದ್ದು ಮುಂದು ಹೋಗಿ, ಹಸ್ತಾವಲಂಬನವನ್ನು ಕೊಟ್ಟು) ಮಿತ್ರಾ! ಈ ಆಸನದ ಮೇಲೆ ಕುಳಿತುಕೊ (ಎಂದು ಎನ್ನಲು ವೀರಸೇನನು ಕುಳಿತುಕೊಳ್ಳುವನು. ನಂತರ ಹಂಸರಾಜನು ಕುಳಿತುಕೊಳ್ಳುವನು.)

**ವೀರಸೇನ:**— ಗೆಳೆಯನೇ! ಯಾವತ್ತೂ ಕುಶಲವೇ?

**ಹಂಸರಾಜ:**— ಕುಶಲವು. ಆದರೆ, ವೀರಸೇನಾ! ಈ ದಿವಸ ನೀನು ತಡಮಾಡಿ ಇಲ್ಲಿಗೆ ಬಂದಕಾರಣವೇನು?

**ವೀರಸೇನ:**— ಗೃಹಕೃತ್ಯಗಳಲ್ಲಿ ತೊಡಗಿದ್ದರಿಂದ ಬರಲಿಕ್ಕೆ ತುಸತಡ ವಾಯಿತು. ಒಳ್ಳೇದು; ಮಿತ್ರಾ! ಇಂದು ನಿನ್ನ ಮುಖಕಮಲವು ಸ್ವಲ್ಪ ಬಾಡಿದಂತ ಕಾಣುವುದು. ಇದರ ಕಾರಣವೇನಿರಬಹುದು. (ಸ್ವಲ್ಪ ವಿಚಾರ ಮಾಡಿ) ಹಾ! ತಿಳಿಯಿತು. ಯಾವುದೋ ಒಂದು ಮಹತ್ವದ ಕಾರ್ಯದ ವಿಷಯ ವಾಗಿ, ನೀನು ಚಿಂತೆಯಲ್ಲಿ ಮುಳಗಿರಬಹುದೆಂದು ತೋರುವುದು.

**ಹಂಸರಾಜ:**— ನಿನಗೆ ಹೇಗೆ ತಿಳಿಯಿತು?

**ವೀರಸೇನ:**— ನಿನ್ನ ಮುಖದ ಮೇಲಿನ ಕಳೆಯೇ ನಿನ್ನ ಮನಸ್ಸಿನ ಭಾವವನ್ನು ನನಗೆ ತಿಳುಹಿಸಿತು. ಒಳ್ಳೇದು; ಈಗ ನಿನ್ನನ್ನು ಚಿಂತೆಗೆ ಗುರಿ ಮಾಡಿದ ಕಾರಣವಾದರೂ ಯಾವುದು?

**ಹಂಸರಾಜ:**— ನನ್ನ ಮನೋಭಾವವನ್ನು ನಿನಗೆ ತಿಳುಹಿಸದಿದ್ದರೆ ನನ್ನ ಮನಸ್ಸಿಗೆ ಸಮಾಧಾನವಾದರೂ ಹೇಗಾದೀತು? ನಿನ್ನಂಥ ಜೀವದ ಗೆಳೆಯನ ಮುಂದೆ ನನಗಾದ ಸುಖದುಃಖವನ್ನು ಹೇಳದೆ ಇನ್ನ್ಯಾರ ಮುಂದೆ ಹೇಳಬೇಕು? ವೀರಸೇನಾ! ಮೋಹಜಾಲದಲ್ಲಿ ಸಿಲುಕಿ ಸಂತಾಪಕ್ಕೆ ಗುರಿ ಯಾದ ನನ್ನ ರಕ್ಷಣೆಯನ್ನು ಮಾಡುವ ಭಾರವು ನಿನ್ನನ್ನೇ ಕೂಡಿಯದೆ.

**ವೀರಸೇನ:**— ಅಂಥ ಮಹತ್ವವಾದ ಸಂಗತಿಯಾದರೂ ಯಾವುದು? ಹೇಳು, ಎಂದರೆ ಏನಾದರೂ ಹಂಚಿಕೆಯನ್ನು ಯೋಜಿಸಲಿಕ್ಕೆ ಬಂದೀತು,

ಈಗ ನಿನ್ನನ್ನು ಚಿಂತೆಗೆ ಗುರಿಮಾಡಿದ ಸಂಗತಿಯು ಯಾವುದದೆ? ಮೊದಲು ಹೇಳು.

**ಹಂಸರಾಜ:**— ವಿಶೇಷವೇನೂ ಇಲ್ಲ. ಚಂಪಕನಗರಕ್ಕೆ ಹೋಗಬೇಕೆಂಬುವ ಆಲೋಚನೆಯಲ್ಲಿ ತೊಡಗಿರುವೆನು.

**ವೀರಸೇನ:**— ಮಿತ್ರಾ! ಚಂಪಕನಗರಕ್ಕೆ ಅಧಿಪತಿಯಾದ ಚಂದ್ರಶೇಖರನು ನಮಗೆ ವೈರಿಯಾಗಿರುವುದರಿಂದ ನಾವು ಅಲ್ಲಿಗೆ ಹೋದರೆ ನಮಗೆ ಏನೂ ಕಲ್ಯಾಣವಾಗಲಿಕ್ಕಿಲ್ಲ. ಮೇಲಾಗಿ ಅಲ್ಲಿಗೆ ಹೋಗುವುದರಲ್ಲಿ ಅಂಥ ಮಹತ್ವವಾದ ಉದ್ದೇಶವಾದರೂ ಏನು?

**ಹಂಸರಾಜ:**— ಸ್ವಯಂವರಕ್ಕೋಸ್ಕರ.

**ವೀರಸೇನ:**— ಸ್ವಯಂವರಪತ್ರಿಕೆಯು ಬಂದಿರುವುದೇನು?

**ಹಂಸರಾಜ:**— ಇಲ್ಲ.

**ವೀರಸೇನ:**— ಎಂದಮೇಲೆ ನಿನಗೆ ಸ್ವಾಭಿಮಾನವೇ ಇಲ್ಲವೆಂಬಂತೆ ತೋರುವುದು. ಆದರವಿಲ್ಲದ ಸ್ಥಳಕ್ಕೆ ಹೋಗಲು ನಿನ್ನ ಮನಸ್ಸಾದರೂ ಹೇಗಾಯಿತು?

**ಹಸಂರಾಜ:**— ನೀನು ಹೇಳುವುದೆಲ್ಲ ನಿಜವು. ಆದರೆ ತುರುಣಿಯುರಿಗೆ ಕೊಟ್ಟ ವಚನವನ್ನು ಪಾಲಿಸುವುದೇ ನನಗೆ ಹೆಚ್ಚು ಶ್ರೇಯಸ್ಕರವು. ಇದಲ್ಲದೆ ಆ ಮನಮೋಹಿನಿಯು ಬಹು ಸುಂದರಿಯಾಗಿರುವಳು. ಅವಳ ಮುಖಾವಲೋಕನವನ್ನು ಮಾಡಿದಂದಿನಿಂದ ನನ್ನ ಮನಸ್ಸು ಯಾವಾಗಲೂ ಅವಳ ಕಡೆಗೆ ಧಾವಿಸುತ್ತಿರುವುದು. ಹಾಗೂ ನನ್ನ ಮನೋದೇವತೆಯು ಅವಳ ಸಹವಾಸವನ್ನು ಅಪೇಕ್ಷಿಸಲು ನನಗೆ ಹೇಳುವುದು. ಆ ಚಾರುಗಾತ್ರಿಯ ಅನುಪಮಸೌಂದರ್ಯವು ನನ್ನ ಹೃದಯದ ಮೇಲಂತೂ ತನ್ನ ಪೂರ್ಣಸ್ವಾಮಿತ್ವವನ್ನು ಸ್ಥಾಪಿಸಿ ಇದೆ. ಆ ರಾಜಪುತ್ರಿಯು ಬಹು ಸುಗುಣಿಯೂ ರಮಣಿಯೂ ಮಧುರಭಾಷಿಣಿಯೂ ಆಗಿರುವಳು. ಮಿತ್ರನೇ! ಅವಳನ್ನು ಎಷ್ಟೆಂತ ವರ್ಣಿಸಲಿ!!

ರಾಗ: ಖಮಾಜ ತಾಲ ತ್ರಿತಾಲ.

**೧೪ ಪದ.** ಧಾಟಿ:—(**था नवनवल नयेनात्सवा**)

ಆ ನವಯುವತಿ ಮುದ ಬೀರುವಾ | ಮಣಿಯೇ ನೀ ತಿಳಿ |
ಈ ನರರಮನ ಗೆಲೆಯುವಾ ನಾರಿಯೆ ಮೋಹಿನಿ ಧೀರಾ || ಪ ||
ಮರೆಗೆನಿಲ್ಲುತೀ ಮುಖವ ನೋಡುವಾ |
ಧಾರಾ ತಲದಿಜಾಣಾ |
ನಾರಿಯ ಚಂಚಲನೋಟವೆ ತಾನೀ, ಪ್ರಾಣವ |
ಹೀರುವಬಾಣಾ || ೧ ||

ಇದಲ್ಲದೆ ಆ ಸುಕುಮಾರಿಯು ಇಲ್ಲಿ ಕಳುಹಿಸಿದ ದೂತಿಯ ಮುಖಾಂತರದಿಂದ ಅವಳ ಮನೋರಥವು ನನಗೆ ತಿಳಿಯಿತು. ನಿಜವಾಗಿ ಆ ಸುಂದರಿಯ ಪ್ರೇಮವು ನನ್ನ ಮೇಲೆ ಇದೆ ಎಂಬುವುದಕ್ಕೆ ಏನೂ ಸಂಶಯವಿಲ್ಲ.

**ವೀರಸೇನ:**—ಒಳ್ಳೇದು. ಈಗ ಆ ದೂತಿ ಎಲ್ಲಿರುವಳು?

**ಹಂಸರಾಜ:**—ಅವಳು ಈಗಲೇ ಚಂಪಕನಗರಕ್ಕೆ ತಿರುಗಿಹೋದಳು.

**ವೀರಸೇನ:**—ಅವಳಿಗೆ ನೀನು ಏನು ಹೇಳಿಕಳುಹಿಸಿದೆ?

**ಹಂಸರಾಜ:**—ಸ್ವಲ್ಪಾದರೂ ಚಿಂತಿಸಬೇಡಿರಿ. ನಾನು ಸ್ವಯಂವರಕ್ಕೆ ತಪ್ಪದೇ ಬರುತ್ತೇನೆಂದು.

**ವೀರಸೇನ:**—ನೀನು ಈ ರೀತಿ ದೂತಿಯ ಕಡೆಯಿಂದ ನಿರೂಪವನ್ನು ಹೇಳಿ ಕಳುಹಿಸಿದ್ದು ನನ್ನ ಮನಸ್ಸಿಗೆಂತೂ ಯೋಗ್ಯವಾಗಿ ಕಾಣುವುದಿಲ್ಲ. ಮೇಲಾಗಿ ಚಂದ್ರಶೇಖರನು ಕರೆಯದಿರುವಾಗ ನೀನು ಸ್ವಯಂವರಕ್ಕೆ ಹೋಗುವುದು ಉಚಿತವಲ್ಲ.

**ಹಂಸರಾಜ:**—ಅದೇಕೆ?

**ವೀರಸೇನ:**—ಯಾಕಂದರೆ ಪ್ರಸ್ತುತ ಸಂಗತಿಗಳ ಮೇಲಿಂದ ವಿಚಾರಿಸಲಾಗಿ ಆ ನಮ್ಮ ಕಡುವೈರಿಯಾದ ಚಂದ್ರಶೇಖರನು ನಮ್ಮನ್ನು ಸೆರೆಯಲ್ಲಿ ಇಡುವುದಕ್ಕೆ ಈ ತರದ ಹಂಚಿಕೆಯನ್ನು ಯೋಜಿಸಿದಂತೆ ಕಾಣುವುದು. ವೈರಿಗಳು ತಮಗಾಗದವರನ್ನು ಯಾವ ರೀತಿಯಿಂದಾದರೂ ವಂಚಿಸಿ, ಕಠಿನ

ಪ್ರಸಂಗದಲ್ಲಿ ನೂಕುವುದು ಸಹಜವಿದೆ. ಒಂದು ವೇಳೆ ಕ್ರೂರವಾದ ಹುಲಿಯನ್ನು ನಂಬಿದರೂ ನಂಬಬಹುದು. ವೈರಿಯನ್ನು ಮಾತ್ರ ಸರ್ವಥಾ ನಂಬಲಾಗದು. ತರುಣಿಯ ಮೋಹಪಾಶಕ್ಕೊಳಗಾಗಿ ಅಲ್ಲಿಗೆ ಹೋಗುವುದು ನನಗಂತೂ ನೆಟ್ಟಗೆ ಕಾಣುವುದಿಲ್ಲ.

**ಹಂಸರಾಜ:**—ನೀನು ಎನ್ನುವುದೆಲ್ಲ ನಿಜವು. ಆದರೆ ಶೂರಳೂ ಚತುರಳೂ ನಿಷ್ಕಪಟಿಯೂ ಆದ ತರುಣಿಯ ವಿನಂತಿಗೆ ಮಾನಮಾಡಿ, ಅವಳ ಅನುಮತಿಯಿಂದಲೇ ಅವಳನ್ನು ವರಿಸಲು ಪ್ರಯತ್ನಮಾಡುವುದು ಅಯೋಗ್ಯವಾದೀತೆ? ಇದಲ್ಲದೆ ಆ ತರುಣೀಮಣಿಯು ನನಗೆ ಶರಣ ಬಂದಿರುವುದರಿಂದ ಅವಳ ಮನೋರಥವನ್ನು ಪೂರ್ಣಮಾಡುವುದು ನನ್ನ ಧರ್ಮವಾಗಿದೆ. ಆದಕ್ಕಂತೆಯೇ ನಾನು ಚಂಪಕನಗರಕ್ಕೆ ಹೋಗುವ ನಿಶ್ಚಯವನ್ನು ಮಾಡಿರುವೆನು. ವೈರಿಗೆ ಹೆದರಿ ಸತ್ಯಮಾರ್ಗವನ್ನು ತ್ಯಜಿಸುವುದು ನಮ್ಮಂಥ ಕ್ಷತ್ರಿಯರಿಗೆ ಧರ್ಮವಲ್ಲ. ನೀನು ನನ್ನ ಸಂಗಡ ಇದ್ದರೆ ಮೃತ್ಯುದೇವತೆಯು ನಮ್ಮೆದುರಿಗೆ ಬರಲಿಕ್ಕೆ ಅಂಜುವಳು.

**ವೀರಸೇನ:**—ನನ್ನ ಶೌರ್ಯವನ್ನು ಕೊಂಡಾಡದಿರು. ಮಿತ್ರಾ! ವೈರಿಯ ರಾಜ್ಯದಲ್ಲಿ ಕಾಲಿಡುವುದೂ ಹಾವಿನ ಹೆಡೆಯಮೇಲೆ ಕಾಲಿಡುವುದೂ ಒಂದೇ. ನೀನು ವಿರಹತಾಪಕ್ಕೆ ಒಳಗಾದವನು. ಎಂದಮೇಲೆ ನಾನು ಹೇಳುವ ಮಾತೆಲ್ಲ ನಿನಗೆ ವಿಷಮಯವಾಗಿದ್ದಂತೆ ಕಂಡುಬರುವುದು ಸಹಜವೇ.

**ಹಂಸರಾಜ:**—ಆದಿರಲಿ ಸಖನೇ! ನಾನು ಅಲ್ಲಿಗೆ ಹೋಗಲಿಕ್ಕೆ ತಪ್ಪಿದರೆ, ವಚನಭಂಗಮಾಡಿದಂತಾಗುವುದು, ಹಾಗೆ ಮಾಡುವುದರಿಂದ ಸುಳ್ಳಾಡಿದ ಪಾಪವು ನನ್ನ ಮೇಲೆ ಬರುವುದು. ಸತ್ಯಮಾರ್ಗದಿಂದ ನಡೆಯುವವರಿಗೆ ಇಹಪರಲೋಕಗಳಲ್ಲಿ ಸದ್ಗತಿಯಾಗುವುದು. ಮಿತ್ರಾ! ಸತ್ಯದ ಮಹಿಮೆಯನ್ನು ಎಷ್ಟಂತ ವರ್ಣಿಸಲಿ!

**೧೫ ಪದ.** (ರಾಗ:—ಶಂಕರಾಭರಣ ಝಂಪೆತಾಳ.)

ಪ್ರಾಣಸಖ, ಸತ್ಯತಾ ತಾನಾಗಿತೇಜವೇ |
ಮಾನವರ ಕಾವುದೋ ವೀರಸೇನಾ || ಪ ||

ಸುರಲೋಕಭುವನದಾ । ಮಾರ್ಗವನೆತೋರುವಾ
ಆರ್ಯ, ನಿಜವೇಸದಾ । ಚಾರುರೂಪಾ ॥ ೧ ॥
ಮನತಾಪನೀಗುತಾ । ಮಾನವನೆಕಾಯುವಾ
ಇನಿದಾದ ಸತ್ಯವೇ । ಪ್ರಾಣದಾತಾ ॥ ೨ ॥

ನಾನು ಕೊಟ್ಟ ಭಾಷೆಗೆ ತಪ್ಪಲಾರೆನು. ಬೇಕಾದರೆ ನೀನು ಇಲ್ಲಿಯೇ ಇರು. ನಾನು ಒಬ್ಬನೇ ಹೋಗಿ ಬರುವೆನು.

**ವೀರಸೇನ:**—ಮಿತ್ರಾ! ಹೀಗೆ ನನ್ನ ಮೇಲೆ ನಿರ್ದಯನಾಗಬೇಡ. ನೀನು ನನ್ನ ಜೀವದ ಗೆಳೆಯನಲ್ಲವೇ? ನೀನಿಲ್ಲದಿದ್ದರೆ ಒಂದು ಘಳಿಗೆಯು ನನಗೆ ಒಂದು ಯುಗವಾಗಿ ತೋರುವುದು. ನಿನ್ನನ್ನು ಸಂಕಟದಲ್ಲಿ ದೂಡಿ ಮನೆಯಲ್ಲಿ ಕುಳಿತುಕೊಳ್ಳುವುದು ನನಗೆ ಸರಿದೋರುವುದಿಲ್ಲ. ಸವಿನುಡಿಗಳಿಂದ ಧನವನ್ನು ಅಪಹರಿಸಿ, ನೀಚತನದಿಂದ ವರ್ತಿಸುವ ಅಧಮಮಿತ್ರರಲ್ಲಿ ಒಬ್ಬನಂತೆ ನನ್ನನ್ನು ಎಣಿಸಬೇಡ. ಯಾಕಂದರೆ ಈ ನನ್ನ ಕೈಯೊಳಗಿನ ಖಡ್ಗವು ನಿನ್ನ ರಕ್ಷಣೆಯ ಸಲುವಾಗಿಯೇ ಇರುವುದು. ಹಾಗೂ ನಿನ್ನ ದೇಹಕ್ಕೆ ತಾಪವನ್ನು ಕೊಡುವ ನೀಚರ ರುಂಡಗಳ ಖಂಡಿಸಿ, ಚಂಡಾಡುವ ವೀರನು ಇಲ್ಲಿಯೇ ಉಳಿಯುವುದಕ್ಕೆ; ಕೈಯೊಳಗೆ ಕಂಕಣವನ್ನು ಇಟ್ಟುಕೊಂಡಿರುವುದಿಲ್ಲ. ಮಿತ್ರಾ! ನಾನೂ ನಿನ್ನ ಸಂಗಡ ಚಂಪಕನಗರಕ್ಕೆ ಬರುವೆನು.

**ಹಂಸರಾಜ:**—ಹಾಗಾದರೆ ಮಿತ್ರನೇ! ನಾವು ಎಷ್ಟು ಸೈನ್ಯವನ್ನು ಸಂಗಡ ಕರೆದುಕೊಂಡು ಅಲ್ಲಿಗೆ ಹೋಗಬೇಕು?

**ವೀರಸೇನ:**—ಸೈನ್ಯದ ಅವಶ್ಯವೇ ಇಲ್ಲ. ನಾವಿಬ್ಬರು ಸರದಾರರ ವೇಷಗಳನ್ನು ಹಾಕಿಕೊಂಡು ಗುಪ್ತರೀತಿಯಿಂದ ನಗರವನ್ನು ಪ್ರವೇಶಿಸಿ ಸೋಣ. ಆ ತರುಣಿಯ ಪ್ರೇಮವು ನಿನ್ನ ಮೇಲೆ ಇದ್ದದ್ದೇ ನಿಜವಾದರೆ ಅವಳು ನಿನ್ನನ್ನೇ ವರಿಸುವಳು. ಆ ಮೇಲೆ ನಾವು ಅವಳನ್ನು ಹಂಚಿಕೆಯಿಂದ ಇಲ್ಲಿಗೆ ಕರೆದುಕೊಂಡು ಬರೋಣ.

**ಹಂಸರಾಜ:**—ಒಳ್ಳೇದು, ಹಾಗೇ ಆಗಲಿ. ವೀರಸೇನಾ! ನನ್ನ ವಿಷಯದಲ್ಲಿ ನೀನು ತೋರಿಸಿದ ಪ್ರೇಮವು ನನ್ನ ಮನಸ್ಸಿಗೆ ಬಹಳೇ ಆನಂದವನ್ನುಂಟು

ಮಾಡುತ್ತದೆ. ಇನ್ನು ಚಂಪಕನಗರಕ್ಕೆ ಹೋಗುವ ಆಲೋಚನೆಯನ್ನು ಮಾಡುವಾ. ಈ ಕಾರ್ಯದಲ್ಲಿ ನಮಗೆ ಸಹಾಯಮಾಡುವವನು ಜಗನ್ನಿಯಾಮಕನಾದ ಸಾಕ್ಷಾತ್ ಪರಮೇಶ್ವರನೇ ಇರುವನು. ದೇವಾ! ಕೃಷ್ಣಾ!! ದಯಾನಿಧೇ!!! ನಿನ್ನ ಕೃಪಾಛತ್ರವು ನಮ್ಮ ಮೇಲೆ ಯಾವಾಗಲೂ ಇರಲಿ. ಮಿತ್ರಾ! ಕೃಷ್ಣನು ಸಾಮಾನ್ಯನಲ್ಲ.

**೧೬ ಪದ.** (ಧಾಟಿ:— **जलधर फिरति गगनभर**)

ಗಿರಿಧರಮುರಹರ ಮುರಲಿಧರನೆ ನರತಾಪವನೀಗುವನಾ |
ಹರಿನೀತಿಳಿಕೃಷ್ಣ ನಿರಂಜನದೇವ ಮನೋಹರ || ಪ ||
ನರರಲೋಕದೀ ಕ್ರೂರಮಾನವರ ದಂಡಿಸಿ ಚಕ್ರಧರ |
ಮುರಾರಿ ಶರಣರ ಸತತಪೊರೆವನುರೆ ಇಂದು | ಮುರಲಿಧರ ||೧||
ಸರಿಯೇ ಜಗದಿ ಭವತಾಪಜ್ವರ ನೀಗುವವರ ಶ್ರೀ |
ಹರಿಗೆ ನಿರಂತರ ಪಾಲಿಪ ಮಥುರಾನಾಥ | ಮುರಲಿಧರ || ೨ ||

ಇನ್ನು ಮುಂದಿನ ಕಾರ್ಯದ ಯೋಚನೆಯನ್ನು ಮಾಡುವಾ, ನಡೆ.

(ಎಂದು ಇಬ್ಬರೂ ಹೋಗುವರು.)

---

# ೨ನೆಯ ಪ್ರವೇಶವು.



## ಸ್ಥಳ:—ಚಂಪಕನಗರಕ್ಕೆ ಹೋಗುವ ಹಾದಿಯು.

**ಪಾತ್ರಗಳು:— ಕುಮತಿರಾಜ ಮತ್ತು ವಿಚಿತ್ರಸೇನ.**

---

ಬರುವ ರೀತಿಯು:— ಉತ್ತಮ ಉಡುಪುಗಳನ್ನು ಧರಿಸಿದ ಕುಮತಿಯು ವಿಚಿತ್ರಸೇನನೊಡನೆ ಬರುವನು.

**ವಿಚಿತ್ರಸೇನ:**— (ಕುಮತಿಯೊಡನೆ ಪ್ರವೇಶಮಾಡಿ) ಮಿತ್ರನೇ! ಇಲ್ಲಿ ಕಾಣಿಸುವ ಪಟ್ಟಣವು ಯಾವುದು? ನಾವು ಚಂಪಕನಗರಕ್ಕೆ ಹೋಗಿ ಮುಟ್ಟಬೇಕಾದರೆ ಎಷ್ಟು ದೂರ ಹೋಗಬೇಕಾದೀತು?

ಗ್ರಂಥಾಲಯ ಚನ್ನೇಗೌಡ ಪುಸ್ತಕ ಭಂಡಾರ

**ಕುಮತಿ**:— ಅಗೋ! ಅಲ್ಲಿ ಕಾಣಿಸುವ ಪಟ್ಟಣವೇ ಚಂಪಕ ನಗರವು. ಬಹಳ ಹೊತ್ತಿನವರೆಗೆ ನಡೆಯುವ ಕಾರಣವೇ ಇಲ್ಲ.

**ವಿಚಿತ್ರಸೇನ**:— ಮಿತ್ರಾ! ನಾವು ಮಾತಾಡುತ್ತ ಮಾತಾಡುತ್ತ ಚಂಪಕ ನಗರದ ಹತ್ತಿರ ಬಂದೇ ಬಿಟ್ಟೆವಲ್ಲ! ಒಳ್ಳೇದು, ಇಲ್ಲಿಗೆ ಬರುವ ಉದ್ದೇಶವನ್ನು ನೀನು ನನಗೆ ಹೇಳುತ್ತೇನೆ ಎಂದು ಹೇಳಿದ್ದೆಯಲ್ಲ, ಅದು ಯಾವುದು?

**ಕುಮತಿ**:— ಓ ಹೋ! ಆ ಕಾರಣವು ಬಹಳ ಮಹತ್ವವುಳ್ಳುದು.

**ವಿಚಿತ್ರಸೇನ**:— ಏಕೆ? ನನಗೆ ತಿಳಿಸುವುದಕ್ಕೆ ಬರುವ ಹಾಗಿಲ್ಲವೇನು?

**ಕುಮತಿ**:— ಹೇಗಾದರೂ ನಾನು ನಿನ್ನ ಮುಂದೆ ಹೇಳುವೆನು. ಅದಾವ ದೊಡ್ಡ ಮಾತು?

**ವಿಚಿತ್ರಸೇನ**:— ಹೇಳು, ಹಾಗಾದರೆ.

**ಕುಮತಿ**:— ನಾನು ಇಲ್ಲಿಗೆ ಬರುವ ಕಾರಣವೇನಂದರೆ, ಹೇಗಾದರೂ ಮಾಡಿ ಅತಿಸುಂದರಳಾದ ಒಂದು ಕನ್ಯಕೆಯನ್ನು ಹೊಂದುವುದಕ್ಕಾಗಿ. ವಿಚಿತ್ರ ಸೇನಾ! ಅವಳ ಮೈಬಣ್ಣವು ನಿಜವಾಗಿ ವರ್ಣನೀಯವಾಗಿದೆ.

**ವಿಚಿತ್ರಸೇನ**:— ಹೀಗೋ!! (ಎಂದು ನಗುತ್ತ) ಹಾಗಾದರೆ ಆ ಸುಂದ ರಾಂಗಿಯ ಮೈಬಣ್ಣವು ತೊಳೆದ ಕೆಂಡದಂತೆ ಇರಬಹುದು.

**ಕುಮತಿ**:— ಗೆಳೆಯನೇ! ವಿಚಿತ್ರಸೇನನೆಂಬ ಹೆಸರು ಮಾತ್ರ ನಿನಗೆ ಚನ್ನಾಗಿ ಒಪ್ಪುವುದು ನೋಡು ಮೂರ್ಖಾ! ತೊಳೆದಕೆಂಡವು ಕಪ್ಪಾಗಿರು ವುದಿಲ್ಲೆ?

**ವಿಚಿತ್ರಸೇನ**:— ಹೌದು. ಹಾಗಾದರೆ ಕೆಂಡದಂತೆ ಕೆಂಪಾಗಿರುವಳೇನು?

**ಕುಮತಿ**:— ಛೀ! ಛೀ! ಅವಳ ಮೈಬಣ್ಣವು ಕೇದಿಗೆಯಂತೆ ಇರುವುದು. ಅಹಾಹಾ!!! ಅವಳು ಬಹು ಚೆಲುವೆಯು, ಚಂಪಾರಣ್ಯದಲ್ಲಿ ಆ ತರುಣೀಮಣಿ ಯನ್ನು ನೋಡಿದಂದಿನಿಂದ ನನ್ನ ಮನಸ್ಸು ಆವಳನ್ನೇ ಲಗ್ನವಾಗುವುದಕ್ಕೆ ಹವಣಿಸಹತ್ತಿದೆ. ಸುಂದರಿಯರ ಸೌಂದರ್ಯಕ್ಕೆ ಮರುಳಾಗುವುದು ಪುರುಷ ಸ್ವಭಾವವೇ ಸರಿ. ಮಿತ್ರನೇ!

**೧೭ ಪದ.** ರಾಗ:—ಕಿರ್ವಾಣಿ ತಾಲ ದಾದರಾ.

ಧಾಟಿ:—(ವರ ಮುಲಸಖಿ ಬ್ರೂಚುಟನೀ.)

ತರುಣಿಮಣಿಗೆ ಈ ಮನತಾ ।
ಮರುಳಾಗಿದೆ ಜಾಣಾ ॥ ಪ ॥
ಮನುಜರನೇ ವಲಿಸುವಳಾ ।
ವನಿತೆನೀಡಿ ತಾ ಮೋದಾ ॥ ೧ ॥
ಓರೆನೋಟಬೀರುತಲೀ ಜಗದಿ ರಮಣಿಮಣಿತಾನೇ ।
ಶರಣರನೇ । ತರುಣರನೇ ಗೆಲೆಯುವಳೋ ॥ ೨ ॥

**ವಿಚಿತ್ರಸೇನ:**—ಆ ಸುಂದರಿಯು ಯಾರು?

**ಕುಮತಿ:**—ಚಂಪಾರಣ್ಯದಲ್ಲಿ ಚಂದ್ರಶೇಖರ ರಾಜನ ಮಗಳಾದ ಕಮಲೆಯು; ಎಂದರೆ ನನ್ನ ಪ್ರೇಮಕ್ಕೆ ಪಾತ್ರಳಾದ ಮನಮೋಹಿನಿಯು, ಬೇಟೆಯಾಡಲಿಕ್ಕೆ ಬರುವಳೆಂಬ ವಾರ್ತೆಯನ್ನು ಕೇಳಿಯೇ, ನಾನು ಅವಳೆಡೆಗೆ ಹೋಗಿ, ಅವಳ ಮನಸ್ಸನ್ನು ಒಲಿಸುವುದಕ್ಕೆ ವಿಶ್ವಪ್ರಯತ್ನಗಳನ್ನು ಮಾಡಿದೆನು. ಆದರೂ ನನ್ನ ಮನೋರಥವು ಕೈಗೂಡಲಿಲ್ಲಾ. ಏಕೆಂದರೆ, ನಾನು ಬಹು ದೈನ್ಯದಿಂದ ಅವಳಿಗೆ ನಮಸ್ಕಾರವನ್ನು ಮಾಡಿದರೂ ಸಹ ಆ ನೀಚ ರಾಜಪುತ್ರಿಯು ನನ್ನ ವಿನಂತಿಯನ್ನು ಸ್ವಲ್ಪ ಸಹ ಲೆಕ್ಕಿಸಲಿಲ್ಲಾ. ತುಸ ಹೊತ್ತು ನಾನು ಅಲ್ಲಿಯೇ ನಿಂತಿದ್ದರೆ, ನಾನು ಅವಳ ಲತ್ತಾಪ್ರಹಾರಕ್ಕೆ ಗುರಿಯಾಗಬೇಕಾಗುತ್ತಿತ್ತು. ನಾನು ಅಲ್ಲಿಂದ ಓಡಿಬಂದಿದ್ದರಿಂದಲೇ ಬದುಕಿದೆನು. ಒಳ್ಳೇದು, ಮಿತ್ರಾ! ಇನ್ನು ಆ ರಮಣಿಮಣಿಯು ನನಗೆ ದೊರಕುವ ಬಗೆಯೆಂತು?

**ವಿಚಿತ್ರಸೇನ:**—ಛೀ, ದಡ್ಡಾ ಹೀಗೆ ಮಾಡಿದರೆ ಎಂದಾದರೂ ಸ್ತ್ರೀಯರು ಮರುಳಾಗುವರೇ? ಅಹಾಹಾ!!! ನಿನ್ನ ಜಾಣತನಕ್ಕೆ ಬೆಲೆಯೇ ಇಲ್ಲ. ತರುಣಿಯರನ್ನು ಒಲಿಸಬೇಕಾದರೆ, ಪುರುಷನಲ್ಲಿ ಸಹನಶೀಲತೆಯೂ ಮಿಗಿಲಾದ ಶೌರ್ಯವೂ ಜಾಣತನವೂ ಇರಬೇಕು. ಹುಚ್ಚು ಹುಚ್ಚು ಬಡೆದರೆ ಸ್ತ್ರೀಯರು ಎಂದಿಗೂ ನಮ್ಮನ್ನು ಪ್ರೀತಿಸಲಾರರು. ಇದಲ್ಲದೆ ನಾನು ನನ್ನ

ಪ್ರಿಯಳನ್ನು ದೊರಕಿಸಬೇಕಾದರೆ ಹಣವನ್ನು ಹುಣಸೇಪಕ್ಕದಂತೆ ವೆಚ್ಚ ಮಾಡಿದೆನು.

**ಕುಮತಿ:**— ನೀನೇ ಜಾಣನು. ಸುಂದರಿಯರನ್ನು ಮರುಳುಗೊಳಿಸಲು ಪ್ರಯತ್ನವನ್ನು ಮಾಡುವ ಪುರುಷರೇ ಈ ಲೋಕದಲ್ಲಿ ಧನ್ಯರು.

**ವಿಚಿತ್ರಸೇನ:**— ಅಹುದು. ಹೊನ್ನಿಗಿಂತಲೂ ಹೆಣ್ಣು ಉತ್ತಮ ಹೆಣ್ಣಿಗಾಗಿ ಮನೆಯಲ್ಲಿಯ ಸಂಪತ್ತನ್ನೆಲ್ಲ ಹಾಳುಮಾಡಿ, ಮಣ್ಣುಮುಕ್ಕಿದವರೇ ನಿಜವಾದ ಗಂಡಸರು. ಇದಲ್ಲದೆ ಹಲವರಂತೂ ಭಂಗಾರದಂತಿರುವ ತಮ್ಮ ಹೆಂಡಂದಿರನ್ನು ಬಿಟ್ಟು ಕೈಗಳಲ್ಲಿ ಪರಟೆಗಳನ್ನು ಹಿಡಿದುಕೊಂಡು, ಭಿಕ್ಷಬೇಡಿ ಸಹ ವೇಶ್ಯಾಸ್ತ್ರೀಯರಿಗೆ ಆ ಅನ್ನವನ್ನು ಹಾಕಿ, ಅವರೊಡನೆ ಆನಂದದಿಂದ ಕಾಲವನ್ನು ಕಳೆಯುವರು. ಮಿತ್ರನೇ! ಈ ಲೋಕದಲ್ಲಿ ಇಂಥವರೇ ಧನ್ಯರು. ಇವರಿಗೆ ಸ್ವರ್ಗಸುಖವು ನಿಶ್ಚಯವಾಗಿ ದೊರೆಯುವುದು. ಇಂಥ ಸ್ಥಿತಿಯು ಹಿಂದೆ ಆಗಿಲ್ಲವೇ? ಇನ್ನು ಮುಂದೆ ಆಗುವುದಿಲ್ಲವೆ? ಹೇಳು. ನೀನು ರಾಜ ಕನ್ಯಕೆಗೆ ಮರುಳಾದವನು ಎಂದಮೇಲೆ ಕೇಳುವುದೇನು?

**ಕುಮತಿ:**— ನಾನೆಲ್ಲಿ ಇಲ್ಲೆಂದು ಎನ್ನುವೆನು? ನಾನು ಸಹ ಕಮಲೆಯ ಸಲುವಾಗಿ ಭಿಕ್ಷೆಯನ್ನು ಬೇಡುವುದಕ್ಕೆ ಸಿದ್ಧನಿರುವೆನು. ಒಳ್ಳೇದು (ಎಂದು ನಗುತ್ತ) ಗೆಳೆಯನೇ! ನಿನ್ನ ಪತ್ನಿಯ ರೂಪವು ಹೇಗಿದೆ? ಅವಳು ನಿನಗೆ ಹೇಗೆ ಮೋಹಿಸಿದಳು? ಹೇಳು.

**ವಿಚಿತ್ರಸೇನ:**— ಕಾಮನಂತಿರುವ ನನಗೆ ಮೋಹಿಸದಿದ್ದರೆ ಇನ್ನಾರಿಗೆ ಮೋಹಿಸಬೇಕು. ಮಿತ್ರನೇ! ನಾನು ಅವಳಿಗೆ ಎಣೆಯಿಲ್ಲದಷ್ಟು ದ್ರವ್ಯವನ್ನು ಕೊಟ್ಟಿರುವೆನು. ಹೊನ್ನಿಗೆ ಹೆಣ್ಣು ಮರುಳಾಗುವುದು ನಿಜವಲ್ಲವೇ? ಕುಮತಿಯೇ! ಅವಳ ರೂಪವನ್ನು ನೋಡಬೇಕಾದರೆ ಹಗಲಿನಲ್ಲಿ ಸಹ ದೀವಟಿಗೆಯನ್ನು ಹಚ್ಚಬೇಕು ನೋಡು! ಅಹಾಹಾ!!! ಅವಳು ರತಿಯೇ ಆಗಿರುವಳು. ರತಿಯು! (ಎಂದು ನಗುವನು.)

**ಕುಮತಿ:**— ಹಗಲಿನಲ್ಲಿ ದೀವಟಿಗೆಯನ್ನು ಹಚ್ಚಿ ನೋಡಬೇಕೆಂದು ಹೇಳಿದೆಯಲ್ಲ. (ನಗುತ್ತ) ಅವಳ ಮೈಬಣ್ಣವು ಕಪ್ಪಾಗಿರಬಹುದು.

**ವಿಚಿತ್ರಸೇನ:**— ಕಪ್ಪಾಗಿಲ್ಲ. ಮಸಿಗೆ ಬುದ್ಧಿಯನ್ನು ಹೇಳುವಳು.

**ಕುಮತಿ:**— ಇಂಥ ಕಪ್ಪಾಗಿರುವ ಕನ್ಯಕೆಯನ್ನು ನೀನು ಹೇಗೆ ಲಗ್ನವಾದೆ?

**ವಿಚಿತ್ರಸೇನ:**— ಲಗ್ನವಾಗುವ ಮುಂದೆ ಅವಳ ಮೈಬಣ್ಣವು ಚೆನ್ನಾಗಿತ್ತು.

**ಕುಮತಿ:**— ನೀನು ವಿಚಿತ್ರನು. ಕೆಂಪು ಇದ್ದ ವರ್ಣವು ಕಪ್ಪಾಗುವುದುಂಟೇ? (ಎಂದು ನಗುವನು.)

**ವಿಚಿತ್ರಸೇನ:**— ನಗಬೇಡ. ಸೂರ್ಯನು ನನ್ನ ಹೆಂಡತಿಯ ರೂಪಕ್ಕೆ ಮರುಳಾಗಿ ಅವಳನ್ನು ದಿನಾಲು ನೋಡಿದ್ದರಿಂದ ಅವಳು ಕಪ್ಪಾದಳು. ಆದರೂ ನನ್ನ ಹೆಂಡತಿಯು ಸಾಲಿಗ್ರಾಮದಂತೆ ಮಿರಿಮಿರಿ ಮಿಂಚುವಳು.

**ಕುಮತಿ:**—(ನಗುತ್ತ) ನಿನಗೆ ಹುಚ್ಚು ಬೇರೆ ಹಿಡದಿಲ್ಲವೇ! ನಿನ್ನ ಹೆಂಡತಿಯು ಮೊದಲು ಕಪ್ಪ ಇದ್ದಳು, ಆದರೆ ನೀನು ಮಾತ್ರ ಅವಳಿಗೆ ಮೋಹಿಸಿರುತ್ತಿ. ವಿಚಿತ್ರಸೇನಾ! ನಿನ್ನಂಥ ಹುಚ್ಚನನ್ನು ನಾನು ಎಲ್ಲಿಯೂ ಕಂಡಿಲ್ಲ.

**ವಿಚಿತ್ರಸೇನ:**— ನಾನು ಹುಚ್ಚನಲ್ಲ, ನೀನೇ ಹುಚ್ಚನು. ಏನೇ ಆಗಲಿ, ನಾನು ಒಂದು ಕನ್ಯಕೆಯನ್ನು ದೊರಕಿಸಿದೆನೋ ಇಲ್ಲವೋ ಹೇಳು. ಏನಾದರೂ ಪ್ರಯತ್ನಮಾಡಿ ಕನ್ಯಕೆಯನ್ನು ದೊರಕಿಸಬೇಕು. ಇದೇ ನನ್ನ ತತ್ವವು.

**ಕುಮತಿ:**— ಮಿತ್ರನೇ! ನೀನು ಹೇಳುವುದೆಲ್ಲ ನಿಜವು. ಕಮಲಾದೇವಿಯು ನನ್ನ ಆಭರಣಗಳನ್ನು ನೋಡಿ ಮರುಳಾಗಬೇಕೆಂದೇ ನಾನು ಹೊರಲಾರದಷ್ಟು ಆಭರಣಗಳನ್ನು ಹಾಕಿಕೊಂಡು ಬಂದಿರುವೆನು. ಹಾಯ್! ಹಾಯ್! ಏನು ಮಾಡಲಿ? ದೇವರು ನನ್ನ ಕಿವಿಯನ್ನು ಸ್ವಲ್ಪ ಉದ್ದಮಾಡಿದ್ದರೆ ನಾನು ಇದಕ್ಕೂ ದೊಡ್ಡ ಬಾವಲಿಯನ್ನು ಧರಿಸಿ, ಎಲ್ಲ ಕಡೆಯಲ್ಲಿ ಮೆರೆಯುತ್ತ, ತರುಣಿಯರನ್ನೆಲ್ಲ ಮರಳುಮಾಡುತ್ತಿದ್ದೆನು. ಏನು ಮಾಡಲಿ? ನಾನು ಸಾಮಾನ್ಯನಲ್ಲ. ಜನರು ಮಾತ್ರ ನನ್ನ ನಿಂದೆಯನ್ನು ಮಾಡುವರು. ಉಪಾಯವಿಲ್ಲ!

**ವಿಚಿತ್ರಸೇನ:**—(ತನ್ನೊಳಗೆ) ಕಾಮಾಂಧರು ಲಂಬಕರ್ಣರೇ ಸರಿ. (ಪ್ರಕಟವಾಗಿ) ಮಿತ್ರಾ! ನಮ್ಮ ನಿಂದೆಯನ್ನು ಮಾಡುವವರಿಗೆ ಜ್ಞಾನವೆಲ್ಲಿದೆ?

ಕಾಮನ ಮಹಿಮೆಯು ಹೆಚ್ಚಿನದು. ಕಾಮನನ್ನು ಸುಟ್ಟು ಬೂದಿಮಾಡಿದ ಮಹಾದೇವನು ಸಹ ಪಾರ್ವತಿಯ ಭಿಲ್ಲಿಣೀಯ ರೂಪಕ್ಕೆ ಮರುಳಾಗಿ, ಜಪ ಮಾಲೆಯನ್ನು ಚಲ್ಲಿ ಅವಳ ಬೆನ್ನುಹತ್ತಿದನು. ಎಂದಮೇಲೆ ನಾವು ತರುಣಿ ಯರ ಸಲುವಾಗಿ ಹಾಳಾಗುವುದು ಯೋಗ್ಯವಲ್ಲವೇನು? ಇದಲ್ಲದೆ **"यदेव रोचते यस्मै भवेत्तत्तस्य सुंदरम्"** ಎಂದು ವಿದ್ವಾಂಸರು ವ್ಯರ್ಥವಾಗಿ ಎನ್ನುವರೇ?

**ಕುಮತಿ:**—ಹೌದು. ಮಿತ್ರನೇ! ನೀನು ಹೇಳಿದ್ದು ನಿಜವು. ಮಾತಾ ಡುತ್ತ ಇಲ್ಲಿ ನಿಲ್ಲದೇ ಚಂಪಕನಗರಕ್ಕೆ ಹೋಗಿ, ಅವಳ ಮುಖವನ್ನಾದರೂ ನೋಡುವ; ನಡೆ.

**ವಿಚಿತ್ರಸೇನ:**—ಹಾಗಾದರೆ ನಡೆ. (ಎಂದು ಇಬ್ಬರೂ ಹೊರಟು ಹೋಗುವರು.)



# ೩ನೆಯ ಪ್ರವೇಶವು.



ಸ್ಥಳ:— ಕಮಲೆಯ ರಮಣೀಯವಾದ ಏಕಾಂತಮಂದಿರವು.



ಪಾತ್ರಗಳು:—**ಕಮಲೆ, ಚಿತ್ರರೇಖೆ, ಕೋಕಿಲೆ, ರಾಜದೂತ, ಜಯಸಿಂಹ, ಮಂಜುಘೋಷಾ ಮತ್ತು ಚಂದ್ರಶೇಖರನು.**

ಬರುವ ರೀತಿಯು:—(ಕಮಲೆಯು ತನ್ನ ಸಖಿಯರೊಡನೆ ಆಸನದ ಮೇಲೆ ಕುಳಿತಿರುವಳು.)

**ಕೋಕಿಲೆ:**—ಸಖೀ! ಇಂದು ನಿನ್ನ ಸ್ವಯಂವರವಿದ್ದು ನೀನು ಈ ರೀತಿ ಚಿಂತಿಸುತ್ತ ಏಕೆ ಕುಳಿತುಕೊಂಡಿರುವೆ? ಏಳು. ಅಲಂಕಾರಭೂಷಿತಳಾಗಿ, ಸ್ವಯಂವರ ಮಂಟಪದ ಕಡೆಗೆ ಹೋಗೋಣ ನಡೆ.

**ಕಮಲೆ:**—ಇಷ್ಟು ಅವಸರವೇಕೆ? ಹೋಗೋಣವಂತೆ ಸ್ವಲ್ಪ ತಡೆ.

**ಕೋಕಿಲೆ:**— ಒಳ್ಳೇದು. ಕಮಲೇ! ಹಸ್ತಿನಾವತಿಗೆ ದೂತಿಯುಹೋಗಿ ಬಹಳ ದಿವಸಗಳಾಗಿವೆ. ಇನ್ನೂ ವರೆಗೆ ಏಕೆ ಬರಲಿಲ್ಲ! (ಸ್ವಲ್ಪ ವಿಚಾರಿಸಿ) "ಎಲ್ಲಿದ್ದರೂ ನೀನು ಸ್ವಯಂವರಕ್ಕೆ ತಪ್ಪದೇ ಹಂಸರಾಜನನ್ನು ಇಲ್ಲಿಗೆ ಕರೆದುಕೊಂಡು ಬಾ" ಎಂದು ನಾವು ಅವಳಿಗೆ ಆಜ್ಞೆಯನ್ನು ಮಾಡಿರುವೆವು. ಆ ದೂತಿಯು ಈಗ ಬಂದಾಳು. (ಎಂದು ಎನ್ನುವಷ್ಟರಲ್ಲಿ ಮಂಜುಭಾಷಣೆಯು ಬರಲು; ಅವಳನ್ನು ನೋಡಿ) ಮಂಜುಭಾಷಣಿಯೆ! ಹಂಸರಾಜರು ಬರುವರೇನು?

**ಮಂಜುಭಾಷಣಿ:**— ನಾನು ತಪ್ಪದೇ ಬರುತ್ತೇನೆ. ನೀನು ಮುಂದೆ ನಡೆ ಎಂದು ಅವರು ಹೇಳಿದರು.

**ಕಮಲೆ:**— ಹೀಗೆ ಅವರು ನಿರೂಪವನ್ನು ಹೇಳಿ ಕಳುಹಿಸಿದರೇನು!!! ಚಿತ್ರರೇಖೇ! (ನಗುತ್ತ) ಈಗ ಮಾತ್ರ ನನ್ನ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು.

**ಕೋಕಿಲೆ:**— ಚಿತ್ರರೇಖೆಯೇ! ಅಗೋ! ನಮ್ಮ ಸಖಿಯ ಮುಖವು ಆನಂದದಿಂದ ಹೇಗೆ ಪ್ರಫುಲ್ಲಿತವಾಗಿದೆ ನೋಡು. ಇದಕ್ಕೆ ಆ ಮಹಾನುಭಾವರು ಹೇಳಿಕಳುಹಿಸಿದ ಪ್ರೇಮಯುಕ್ತವಾದ ಆಶ್ವಾಸನವೇ ಸರಿ. (ಕಮಲೆಗೆ )ಕಮಲೇ! ಈಗ ನಿನ್ನ ಮುಖದ ಮೇಲೆ ಕಾಂತಿಯು ಬಂತು.

**ಕಮಲೆ:**— ಅಹುದು. ಗೆಳತಿಯರೇ! ಪ್ರಿಯ ಜನರ ನಿರೂಪವನ್ನು ಕೇಳಿ ಯಾರಿಗೆ ಆನಂದವಾಗಲಿಕ್ಕಿಲ್ಲ. ಏಕೆಂದರೆ ಈ ಪೃಥ್ವಿಯು ಪ್ರೇಮರಸದಿಂದ ತುಂಬಿಹೋಗಿದೆ. ಪ್ರೇಮಪಾಶವೇ ವಾಯು, ಜಲ, ಆಕಾಶ ಭೂಮಿ ಮತ್ತು ತೇಜ ಈ ಪಂಚಮಹಾಭೂತಗಳನ್ನು ಒತ್ತಟ್ಟಿಗೆ ಕೂಡಿಸಿ, ಕಟ್ಟಿದ್ದರಿಂದಲೇ ಸೃಷ್ಟಿಯ ಮತ್ತು ಯಾವತ್ತೂ ಪ್ರಾಣಿಗಳ ಉತ್ಪತ್ತಿಯಾಗಿದೆ. ಎಂದ ಮೇಲೆ ಈ ಪ್ರೇಮವೇ ಎಲ್ಲ ಪ್ರಾಣಿಗಳನ್ನು ಜಗತ್ತೆಂಬ ರಂಗಭೂಮಿಯ ಮೇಲೆ ಕುಣಿಸುವ ಸೂತ್ರಧಾರನಾದಂತಾಯಿತು. ಇದಲ್ಲದೆ ಪ್ರೇಮವು ಮನುಷ್ಯರ ಏಳ್ಗೆಗೂ ಸೌಖ್ಯಕ್ಕೂ ಕಾರಣವು. ಪ್ರೇಮವು ಇಲ್ಲದಿದ್ದರೆ ಈ ಜಗತ್ತಿನ ವ್ಯವಹಾರವು ನಡೆಯಲಾರದು. ಕೋಕಿಲೇ! ಏನು ಹೇಳಲಿ.

**೧೮ ಪದ.** ರಾಗ:—ಝಿಂಝೋಟ ಝಂಪೆತಾಳ.

ಧಾಟಿ:— (**नयने लाजवीत बहु मोलरवा**)

ಸಖಿಯೇ ತಾಪನೀಗಿ ವರಪ್ರೇಮುವದುತಾ |
ಸುಖಧೈರ್ಯವನೆ ಧರೆಯುಜನಕೀವುದು ಸದಾ || ಪ ||
ವಿಮಲೇ ಮಹಾಪ್ರೇಮುತಾ ನೋಡೆ ನಾನಾ |
ತಮನೀಗಿ ಮನತಾಪಕಳೆವ ಸೋಮನಿಹನೇ || ೧ ||

ಆ ಮಹಾತ್ಮರ ದರ್ಶನ ಕಾಲವು ಈ ದುರ್ಭಾಗ್ಯಳ ಪಾಲಿಗೆ ಯಾವಾಗ ದೊರೆಯುವುದೋ ನಾಕಾಣೆ.

**ಕೋಕಿಲೆ:**— ಇಷ್ಟೇಕೆ ಆತುರಳಾಗಿರುವೆ? ಸ್ವಲ್ಪ ವೇಳೆಯಲ್ಲಿಯೇ ನಿನಗೆ ಅವರ ದರ್ಶನಲಾಭವಾಗುವುದು.

**ಕಮಲೆ:**— ಸಾಕು ಸುಮ್ಮನಿರು. ನೀನು ವಿನೋದದಲ್ಲಿಯೇ ಯಾವಾಗಲೂ ಆನಂದಪಡುವೆ, ಈ ನಿನ್ನ ಸ್ವಭಾವವು ನನಗೆ ಸರಿಬರುವುದಿಲ್ಲ.

**ಕೋಕಿಲೆ:**— ಇಷ್ಟು ನಿನ್ನ ಮನಸ್ಸಿಗೆ ಬೇಸರವಾಗುತ್ತಿದ್ದರೆ ದಯಮಾಡಿ ನನ್ನನ್ನು ಕ್ಷಮಿಸು.

**ಕಮಲೆ:**—ಛೇ! ಅದೇನಲ್ಲ. ಇರಲಿ. (ತೆರೆಯುಕಡೆಗೆ ನೋಡಿ) ಈ ದೂತನು ನಮ್ಮ ಕಡೆಗೆ ಬರುವಂತೆ ಕಾಣಿಸುತ್ತದಲ್ಲ! ರಾಜಾಜ್ಞೆಯು ಏನಾಗಿರುವುದೋ ಏನೋ!! (ದೂತನು ಬಂದು,)

**ಜಯಸಿಂಹ:**— ರಾಜಕುಮಾರಿಯರೇ! ಚಂದ್ರಶೇಖರಮಹಾರಾಜರು ತಾವು ಸ್ವಯಂವರಮಂಟಪಕ್ಕೆ ತೀವ್ರವಾಗಿ ಬರಬೇಕೆಂದು ಹೇಳಿಕಳುಹಿಸಿದ್ದಾರೆ. ದಯಮಾಡಿ ಬರಬೇಕು. ಎಲ್ಲರು ತಮ್ಮ ಮಾರ್ಗವನ್ನೇ ನಿರೀಕ್ಷಿಸುತ್ತ ಕುಳಿತಿರುವರು.

**ಕಮಲೆ:**— ಒಳ್ಳೇದು. ಇದೇ ಬಂದೆವೆಂದು ಅವರಿಗೆ ಹೇಳು.

**ಕೋಕಿಲೆ:**— ದೂತಾ! ಹಸ್ತಿನಾವತಿಯ ಹಂಸರಾಜರು ಬಂದಿರುವರೇನು?

**ಜಯಶಿಂಹ:**— ಅವರ ಹೊರತು ಎಲ್ಲ ರಾಜರೂ ಬಂದಿರುವರು. ಹಂಸರಾಜರಿಗೆ ಸ್ವಯಂವರ ಪತ್ರಿಕೆಯು ಹೋಗಿಲ್ಲವೆಂದು ತೋರುತ್ತದೆ.

**ಕಮಲೆ:**— ಹಾಗಾದರೆ ಸ್ವಯಂವರಮಂಟಪಕ್ಕೆ ನಾನು ಬರುವುದಿಲ್ಲ ವೆಂದು ಜನಕನಿಗೆ ತಿಳುಹಿಸು, ಹೋಗು. ಆ ಮಹಾತ್ಮನನ್ನುಳಿದು ಮತ್ತಾರ ಲ್ಲಿಯೂ ನನ್ನ ಮನೋಹಂಸವು ರಮಿಸದು.

**ಜಯಶಿಂಹ:**— ಹೀಗೆ ಹೇಳಿದರೆ ಮಹಾರಾಜರು ನನ್ನ ಮೇಲೆ ಶಿಟ್ಟಾ ಗುವರಲ್ಲ. ಏನು ಮಾಡಲಿ?

**ಕಮಲೆ:**— ಮೂರ್ಖನಂತೆ ಮಾತಾಡಬೇಡ. ನನ್ನ ಅಭಿಪ್ರಾಯವನ್ನು ಸಭೆಯುಲ್ಲಿದ್ದವರಿಗೆಲ್ಲರಿಗೂ ತಿಳಿಸು ಎಂದರಾಯಿತು. ನನ್ನ ಮುಂದೆ ನಿಲ್ಲಬೇಡ. ನಡೆ. ನಾನು ಹೇಳಿದ್ದನ್ನು ತಾತನಿಗೆ ತಿಳುಹಿಸು.

**ಜಯಶಿಂಹ:**— ತಾಯಿಯವರೇ! ಶಿಟ್ಟಾಗಬಾರದು. ತಮ್ಮ ಆಜ್ಞೆ ಯಂತೆ ವರ್ತಿಸಲು ಈ ದಾಸನು ಸಿದ್ಧನಿರುವನು.

**ಚಿತ್ರರೇಖೆ:**— ದೂತನೇ! ಈ ಸಂಗತಿಯನ್ನು ಮಹಾರಾಜರಿಗೆ ಏಕಾಂ ತವಾಗಿ ತಿಳುಹಿಸಿ, ಅವರ ಅಭಿಪ್ರಾಯವನ್ನು ಪುನಃ ಇಲ್ಲಿಗೆ ಬಂದು ಹೇಳು.

**ಜಯಶಿಂಹ:**— ಒಳ್ಳೇದು. (ಎಂದು ಹೋಗುವನು.)

**ಚಿತ್ರರೇಖೆ:**— ಕಮಲೇ! ಈ ರೀತಿ ಉತ್ತರವನ್ನು ನಿನ್ನ ತಂದೆಗೆ ಹೇಳಿ ಕಳುಹಿಸಿದ್ದು ಪ್ರಮಾದವಾಯಿತು. ನಿನ್ನ ತಂದೆಯು ಬಹು ಶಿಟ್ಟಿನ ಸ್ವಭಾವ ದವನು. ಇನ್ನೇನುಗತಿ!

**ಕಮಲೆ:**— ಚಿತ್ರರೇಖೆಯೇ! ನಾನು ನನ್ನ ತಂದೆಯ ಶಿಟ್ಟನ್ನು ಹೇಗಾ ದರೂಮಾಡಿ ಕಡಿಮೆಮಾಡುವೆನು. ಒಂದುವೇಳೆ ಅವನು ನನಗೆ ಶಿಕ್ಷೆಯನ್ನು ವಿಧಿಸಿದರೂ ಸಹ ನಾನು ಸಭೆಗೆ ಹೋಗುವುದಿಲ್ಲ.

**ಚಿತ್ರರೇಖೆ:**— ಸಭೆಗೆ ಹೋಗದೆ ಹೀಗೆ ಹಟಹಿಡಿಯುವ ಕಾರಣ ವೇನು?

**ಕಮಲೆ:**— ನನ್ನ ಮನಸ್ಸಿಗೆ ಆನಂದವನ್ನು ಕೊಡುವವರೇ ಅಲ್ಲಿ ಇಲ್ಲ. ಎಂದ ಮೇಲೆ ಯಾವ ಆಶೆಯಿಂದ ನಾನು ಅಲ್ಲಿಗೆ ಹೋಗಲಿ?

**ಚಿತ್ರರೇಖೆ**:— ಏನೇ ಇರಲಿ, ಈ ರೀತಿ ನಿಷ್ಠುರ ಉತ್ತರವನ್ನು ಹೇಳಿ ಕಳುಹಿಸಿದ್ದು ಯೋಗ್ಯವಾಗಲಿಲ್ಲ. ಯಾವುದಾದರೊಂದು ಪರ್ಯಾಯದಿಂದ ನಿನ್ನ ಅಭಿಪ್ರಾಯವನ್ನು ಅವರಿಗೆ ತಿಳಿಸಬಹುದಾಗಿತ್ತು.

**ಕಮಲೆ**:— ನೀವು ಹೇಳುವುದೆಲ್ಲ ನಿಜವು. ಈ ರೀತಿ ನಿಷ್ಠುರ ಉತ್ತರವನ್ನು ಹೇಳಿಕಳುಹಿಸಿದ ಕಾರಣವು ಆ ಮಹಾತ್ಮನ ಮೇಲಿರುವ ಪ್ರೇಮದ ಉತ್ಕರ್ಷವೇ. ಚಿತ್ರರೇಖೆಯೇ! ಏನುಹೇಳಲಿ; ಆ ವೀರಶಿರೋಮಣಿಯ ರೂಪವೂ ಆ ರೂಪಕ್ಕೆ ತಕ್ಕ ಸಾಹಸಕಾರ್ಯವೂ ಸವಿನುಡಿಗಳೂ ಉದಾರ ಗುಣವೂ ನನ್ನನ್ನು ಮರುಳುಮಾಡಿವೆ; ಅವರೇ ನನ್ನ ಮನೋವಲ್ಲಭರು. ಮೇಲಾಗಿ ಉರ್ಣಾಯೆಂಬ ಕ್ಷಾತ್ರತೇಜದಿಂದಲೂ ಮನೋಹರ ರೂಪದಿಂದಲೂ ಶೋಭಿಸುತ್ತಿರುವ ಅವರ ಆಗಿನ ಅಂದವಾದ ರೂಪವು ನನ್ನ ಕಣ್ಣೆದುರಿಗೆ ಕಟ್ಟಿದೆ. ಸಖಿಯೇ!

**೧೯ ಪದ.** (ಭರನನದೇತು ಫಾಗರಿಯಾ)

ಸ್ಮರಸಮರೂಪನು ಪ್ರಿಯನು ಶಾಂತೆಕೇಳೆ ।
ನಾರೀಮಾನಸದೊಳು ಚರಿಪಸುಮನಬಾಣನು ।
ತರುಣಿಪಾಲನಾತ ಕೇಳೀ ಕುಲಪಾಲಿಪ ॥ ಪ ॥
ಸುಂದರವದನದೊಳತಿ ಹೊಳೆಯುವ ತೇಜ ।
ಇಂದುರವಿಯನೇ ಸೋಲಿಸುವುದು ಪೇಳೆ ।
ಮಂದಗಮನೆಸಮರಾರಾರಣಶಾರ್ದೂಲಗೆ ॥ ೧ ॥

(ಹಾಡು ಮುಗಿಯುವುದರಲ್ಲಿ ದೂತನು ಬಂದು)

**ಜಯಶಿಂಹ**:— ಕಮಲಾದೇವಿಯವರೇ! ಸಭೆಯಲ್ಲಿಯ ರಾಜರೆಲ್ಲರು ತಮ್ಮ ನಿಷ್ಠುರವಾದ ಉತ್ತರವನ್ನು ಕೇಳಿ ಶಿಟ್ಟಾಗಿ, ತಮ್ಮ ತಮ್ಮ ಬಿಡಾರಕ್ಕೆ ಹೊರಟುಹೋದರು. ನಮ್ಮ ಪ್ರಭುಗಳು ಬಹು ಶಿಟ್ಟಿಗೆದ್ದಿರುವರು; ಇನ್ನು ಮುಂದೆ ಏನು ಅನರ್ಥವಾಗುವುದೋ ತಿಳಿಯದು. (ಎಂದು ಸಣ್ಣ ಮೋರೆ ಮಾಡಿ ನಿಲ್ಲುವನು.)

**ಕಮಲೆಯು**:— ಈಗ ಅವರೆಲ್ಲಿರುವರು?

**ಜಯಶಿಂಹ:**— ಮಹಾರಾಜರು ಇಲ್ಲಿಗೇ ಬರಲು ಹೊರಟಿರುವರು. ಈಗಬಂದಾರು. (ತೆರೆಯಕಡೆಗೆ ನೋಡಿ) ದೇವಿಯವರೇ! ನೋಡಿರಿ. ಮಹಾ ರಾಜರೇ ಬಂದರು. (ಎಂದು ಸರಿದು ನಿಲ್ಲುವನು.)

**ಕಮಲೆ:**— ಜನಕನೇ! ನನ್ನ ಅಪರಾಧವನ್ನು ಮನ್ನಿಸಿ, ಈ ಆಸನದ ಮೇಲೆ ಕುಳಿತುಕೊಳ್ಳಬೇಕು.

**ಚಂದ್ರಶೇಖರ:**— (ಕುಳಿತುಕೊಳ್ಳದೆ) ಮೂರ್ಖಳೇ! ಮಾತಾಡಬೇಡ. ಜನಕನೆಂದು ಕರೆಯುವುದಕ್ಕೆ ನಿನಗೆ ನಾಚಿಕೆಯು ಬರುವುದಿಲ್ಲವೇ?

**ಕಮಲೆ:**— ಇದೇನು? ಶಿಟ್ಟಿಗೇಳುವ ಕಾರಣವಾದರೂ ಏನಾಗಿದೆ? ದಯಮಾಡಿ ಹೇಳಿರಿ. ನನ್ನಿಂದ ಯಾವ ಅಪರಾಧವಾಗಿದೆ; ಹೇಳಬೇಕು.

**ಚಂದ್ರಶೇಖರ:**— (ಸಿಟ್ಟಿನಿಂದ) ಚಾಂಡಾಲಿಯೇ! ನಿನ್ನಂಥ ಮೂಢಳು ಎಲ್ಲಿಯೂ ಇಲ್ಲ. ನೀನು ಸ್ವಯಂವರಮಂಟಪಕ್ಕೆ ಬರುವುದಿಲ್ಲವೆಂದು ಹೇಳಿದ್ದು ದೊಡ್ಡ ಅಪರಾಧವಲ್ಲದೆ ಮತ್ತೇನು? ಕಮಲೇ! ನಿನ್ನ ನಿಷ್ಠುರ ಉತ್ತರವನ್ನು ಕೇಳಿದ ರಾಜರು ಸಂತಾಪದಿಂದ ಶಿಟ್ಟಾಗಿ ಸಭೆಯಿಂದ ಎದ್ದು ಹೋದರು. (ಸ್ವಲ್ಪ ಯೋಚಿಸಿ) ನೀನು ಜಾಣಳು, ನಿನಗೇನು ಹೇಳುವುದದೆ. ನನಗೆ ನಿನ್ನಂತಹ ಮಗಳು ಹುಟ್ಟುವುದಕ್ಕಿಂತ ನನ್ನ ಹೆಂಡತಿಯು ಬಂಜೆಯಾಗಿದ್ದರೆ ನೆಟ್ಟಗಾಗುತ್ತಿತ್ತು. ಉಶ್! ಉಶ್! ಏನುಮಾಡಲಿ? ನಾನೇ ದುರ್ದೈವಿಯು.

**ಚಿತ್ರರೇಖೆ:**— ಮಹಾರಾಜರೇ! ಶಾಂತರಾಗಿರಿ, ತಮ್ಮ ಕಮಲಾದೇವಿಯ ಮೇಲೆ ಶಿಟ್ಟಾಗಬಾರದು. ಇವಳಂತಹ ಚತುರಿಯೂ ಗುಣಿಯೂ ಯಾರೂ ಇಲ್ಲ.

**ಚಂದ್ರಶೇಖರ:**— ಅಧಮಳೇ! ನಿನ್ನ ಸಖಿಯನ್ನು ವರ್ಣಿಸಬೇಡ. ಇವಳು ನನ್ನ ಕುಲಕಂಟಕಿಯೇ ಆಗಿರುವಳು; ಇನ್ನೊಂದುಸಾರೆ ಈ ದುಷ್ಟಳನ್ನು ವರ್ಣಿಸಿದರೆ, ನಾನು ನಿನ್ನ ನಾಲಿಗೆಯನ್ನು ಕಡಿದುಹಾಕುವೆನು. ತಿಳಿ.

**ಕಮಲೆ:**— ಅವಳ ಮೇಲೆ ಶಿಟ್ಟಾಗಬೇಡಿರಿ. ನಿಮ್ಮ ಕೋಪವು ಶಾಂತವಾಗಬೇಕಾದರೆ ನಾನು ಏನು ಮಾಡತಕ್ಕದ್ದು. ಅಪ್ಪಣೆಯಾಗಲಿ, ಮಾಡುವೆನು.

**ಚಂದ್ರಶೇಖರ:**— ದುಷ್ಟೇ! ನಾನು ನಿನ್ನ ಬಣ್ಣದ ಮಾತುಗಳಿಗೆ ಮರುಳಾಗುವವನಲ್ಲ. ಏನೇ ಆಗಲಿ, ನೀನು ಸಭೆಗೆ ಬಂದರೆ ನನಗೆ ಸಮಾಧಾನವಾಗುವುದು. ಇನ್ನಾದರೂ ನಾನು ಆ ರಾಜರಲ್ಲಿ ವಿನಯೋಕ್ತಿಗಳನ್ನು ಹೇಳಿ, ಕ್ಷಮೆಬೇಡಿ ಅವರನ್ನು ಪುನಃ ಸ್ವಯಂವರ ಮಂಟಪಕ್ಕೆ ಕರೆಸುವೆನು. ನೀನು ಅವರಲ್ಲಿ ಒಬ್ಬನನ್ನು ಒರಿಸಲೇಬೇಕು.

**ಕಮಲೆ:**— ನಾನು ಸಭೆಗೆ ಬರುವುದೇ ಇಲ್ಲ.

**ಚಂದ್ರಶೇಖರ:**— ಏನು? (ಎಂದು ಗದ್ದರಿಸಿ ಕೇಳುವನು.)

**ಕಮಲೆ:**— ನನ್ನ ಮಾನಸಹಂಸನೇ ಅಲ್ಲಿ ಇಲ್ಲದ ಮೇಲೆ ನನಗೆ ಅಲ್ಲೇನು ಕೆಲಸ?

**ಚಂದ್ರಶೇಖರ:**— ನಿನ್ನ ಮಾನಸ ಹಂಸನು ಯಾರು?

**ಕಮಲೆ:**— ಸೂರ್ಯಕುಲತಿಲಕರಾದ ಹಸ್ತಿನಾವತಿಯ ಹಂಸರಾಜರು.

**ಚಂದ್ರಶೇಖರ:**— ಛಿಃ ದುಷ್ಟೇ! ಬಾಯಿಗೆ ಬಂದಹಾಗೆ ಬೊಗಳುವಿಯಾ? ಆ ನೀಚನು ನನ್ನ ವೈರಿಯು; ನೀನು ನನ್ನ ಮಗಳಿದ್ದು ನನ್ನ ಕುಲನಾಶವನ್ನು ಮಾಡಲು ಹವಣಿಸುವ ಅಧಮನನ್ನೇ ಬಯಸುವಿಯಾ? ಅಹಾಹಾ!!! ಏನು ವಿಲಕ್ಷಣವಿದು? ನಿನ್ನ ಜಾಣತನಕ್ಕೆ ಬೆಲೆಯೇ ಇಲ್ಲ. ಚಾಂಡಾಲಿಯೇ! ಆ ದುಷ್ಟ ಹಂಸನು ದರಿದ್ರನೂ ವಿಶ್ವಾಸಘಾತಕನೂ ಮದಾಂಧನೂ ಆಗಿರುವನು. ಕಮಲೇ! ಸುಶೀಲೆಯೂ ಸುಗುಣೆಯೂ ಸುಕುಮಾರಿಯೂ ಆದ ನಿನ್ನನ್ನು ಆ ಕಪಟ ವಟುವಿಗೆ ಕೊಡುವುದಕ್ಕೆ ನಾನು ಮೂರ್ಖನೆಂದು ತಿಳಿದಿರುವಿಯಾ? ಕುವಲಯಪುರದ ಕುಮತಿರಾಜನೇ ನಿನಗೆ ಯೋಗ್ಯನಾದ ವರನು. ನೀಚನಾದ ಹಂಸರಾಜನ ಸಮ್ಮಂಧವೇ ನನಗೆ ಬೇಡ.

**ಕಮಲೆ:**— (ಬಹು ವಿನಯದಿಂದ) ಜನಕನೇ! ನೀಚನೂ ವಿಷಯಾಂಧನೂ ಆದ ಕುಮತಿರಾಜನು ಶ್ರೀಮಂತನಿದ್ದರೂ ನನಗೆ ಯೋಗ್ಯನಾದವನಲ್ಲ.

**ಚಂದ್ರಶೇಖರ:**— ಅದೇಕೇ?

**ಕಮಲೆ:**— ಧನಿಕರನ್ನು ಲಗ್ನವಾಗುವುದಕ್ಕಿಂತ ಚತುರನೂ ಗುಣಿಯೂ ಆದ ಬಡವನನ್ನೇ ಲಗ್ನವಾಗುವುದು ಹೆಚ್ಚು ಭೂಷಣವು. ಯಾಕಂದರೆ, ಬೆಲೆಯುಳ್ಳ ಆಭರಣಕ್ಕಿಂತಲೂ ಗುಣವೇ ಹೆಚ್ಚಿನದು. ನಿಮ್ಮ ಮನಸ್ಸು ಧನಿಕ

ರನ್ನು ಬಯಸುತ್ತಿದ್ದರೆ, ನೀವು ನನ್ನ ಲಗ್ನವನ್ನು ದ್ರವ್ಯದ ರಾಶಿಯೊಡನೆ ಮಾಡಿ, ದಿನಾಲು ಆ ರಾಶಿಯನ್ನೇ ನೋಡಿ, ಸಂತೋಷಬಡಿರಿ. ಆದರೆ ನೀಚ ಕುಮತಿರಾಜನಿಗೆ ಮಾತ್ರ ನನ್ನನ್ನು ಕೊಡಬೇಡಿರಿ. ತಾತಾ! ದ್ರವ್ಯಕ್ಕೆ ಮರುಳಾಗಬಾರದು. ಯಾಕಂದರೆ:—

**೨೦ ಪದ.** ಧಾಟಿ:— (परदेशी संया)

ಧನದಾಶಾಫಲವೇತಾತಾ ನೋಡೀ | ಜನಕೀಯುವಾ |
ಮನತಾಪವಾ || ಪ ||
ಕೊಲ್ಲುವುದೇ ತಿಳಿಬೀರಿಮಾಯಾ | ಜಾಲವನೇ
ಈ ಭೂಮಿಯೊಳಾ | ಚೆಲ್ವಾಗಿಹ ಸಿರಿಯದುತಾತಾ |
ಬಲಯುತರ, ತಾ ಬಿಡದೆ ನಿರುತಾ || ೧ ||

ಆ ನೀಚನನ್ನು ಲಗ್ನವಾಗುವುದಿಲ್ಲ. ಹಂಸರಾಜರೇ ನನ್ನ ಮನೋಹರರಾಗಿರುವರು. ಮನಸ್ಸಿಗೆ ಬಂದವರನ್ನೇ ಒರಿಸಲು ಬೇಕೆಂದು ಕ್ಷತ್ರಿಯರು ಸ್ವಯಂವರ ಸಮಾರಂಭವನ್ನು ಮಾಡುವರು.

**ಚಂದ್ರಶೇಖರ:**— ಸಾಕು ಸಾಕು, ಏನೇ ಇರಲಿ. ನೀನು ನನ್ನ ವೈರಿಯನ್ನು ನೆನಿಸಬೇಡ. ಅವನ ಹೆಸರನ್ನು ಉಚ್ಚರಿಸಿದರೆ, ನನ್ನ ಮೈಯಲ್ಲ ಉರಿಯುತ್ತದೆ.

**ಕಮಲೆ:**— ನನ್ನ ಪ್ರಾಣದೊಡೆಯನ ನಿಂದೆಯನ್ನು ಮಾಡಬೇಡರಿ. ತಂದೆತಾಯಿಗಳು ತಮ್ಮ ಮಕ್ಕಳು ಸುಖವಾಗಿರಬೇಕೆಂದಲ್ಲವೆ ಲಗ್ನವನ್ನು ಮಾಡುವುದು.

**ಚಂದ್ರಶೇಖರ:**— ಹೌದು. ಮೂರ್ಖಳೇ! ನಿನಗೆ ಆನಂದವಾಗಬಾರದೆಂದೇ ನನ್ನ ಪ್ರಯತ್ನವಿರುವುದೆಂದು ತಿಳಿದಿರುವಿಯಾ? ನಾನು ಮೂಢನು. ಲಗ್ನವಂದರೇನು? ನೀನೇ ಹೇಳು.

**ಕಮಲೆ:**— ತಮ್ಮನ್ನು ಮೂಢರೆಂದು ಹೇಳಿದ್ದರೆ ನನ್ನ ನಾಲಿಗೆಯು ಕತ್ತರಿಸಿ ಬೀಳಲಿ. ನೀವು ಮೂಢರಲ್ಲ. ನಾನೇ ಹತಭಾಗ್ಯಳು. ಜನಕಾ, ವಧೂವರರನ್ನು ಒತ್ತಟ್ಟಿಗೆ ಕುಳ್ಳಿರಿಸಿ, ಅವರ ಮೇಲೆ ಮಂತ್ರಾಕ್ಷತೆಗಳನ್ನು ಹಾಕಿದರೆ

ಲಗ್ನವಾಗುವುದಿಲ್ಲ. ಲಗ್ನವನ್ನು ಮಾಡಿಕೊಳ್ಳುವ ಕನ್ಯಕೆಯ ಮನಸ್ಸು ವರನ ಮೇಲೆ ಅದೆಯೋ ಇಲ್ಲವೋ ಎಂಬುವದನ್ನು ಪರೀಕ್ಷಿಸಿ, ಹಿರಿಯರು ಲಗ್ನ ಮಾಡಬೇಕೇ ಹೊರತು ಚೆಂದಕ್ಕಾಗಿ ಲಗ್ನವನ್ನು ಮಾಡಬಾರದು. ಲಗ್ನವು ನೋಡುವವರಿಗೆ ಚೆಂದಕಂಡರೂ ಲಗ್ನಮಾಡಿಕೊಳ್ಳುವವರು ಅದರ ವಿಷಯ ವಾಗಿ ವಿಚಾರಮಾಡಬೇಕಾಗುವುದು. ಹಾಗೂ ಲಗ್ನದಲ್ಲಿ ಹಾಕಿದ ಗಂಟು ಸಾಯುವವರೆಗೆ ಬಿಚ್ಚುವುದಿಲ್ಲ. ಮನಸ್ಸಿಗೆ ಬಾರದವರೊಡನೆ ಲಗ್ನವನ್ನು ಮಾಡುವುದರಿಂದ ಸಂಸಾರದ ಚೆಂದವೇ ಕೆಟ್ಟುಹೋಗುವುದು. ಸತಿಪತಿಯರು ದಿನಾಲು ಬಡಿದಾಡುವರು. ದೇವರ ನೇಮವಾದರೂ ಉತ್ತಮರಾದವರಿಗೆ ಕನ್ಯಕೆಯನ್ನು ಕೊಡಬೇಕೆಂದೇ ಇರುವುದು. ದೇವರ ನೇಮವನ್ನು ಮೀರಿ ನಡೆಯುವುದು ಮಹಾಪಾಪವು. (ಆತ್ಮಗತಂ) ದೇವಾ! ನನ್ನ ತಂದೆಯು ನನ್ನ ಇಚ್ಛೆಯನ್ನು ಪೂರ್ಣಮಾಡುವುದಿಲ್ಲ. ಇನ್ನು ಮೇಲೆ ನೀನೇ ನನ್ನ ಹಿತ ಚಿಂತಕನು. ನೀನೇ ನನಗೆ ಗತಿಯು.

**೨೧ ಪದ.** (ರಾಗ: ಪಿಲ್ಲು)

ಧಾಟಿ:—(**मी अघना नाशिवे भीति मना**)

ಬಾ ಕರುಣಾನಿಧಿಯೇ ಪಾಲಿಸೆನ್ನಾ | ಲೋಕಾಧಿಪಾ |
ಲೋಕರಂಜನಾ || ಪ ||
ಮರೆವುದೆ ಪ್ರಭುವೇ | ಚರಣಕೆನಮಿಪೇ |
ಕರುಣವನೆ ತೋರಿಸದಾ |
ಹರಿಯೇ ನೀ ಪಾಲಿಸೆನ್ನಾ || ೧ ||

(ಪ್ರಕಟವಾಗಿ) ನೀವು ಮಂಗಲಸೂತ್ರವನ್ನು ಕಟ್ಟಿಸಿ ನನಗೆ ಹೆಚ್ಚಿನ ಸುಖ ವನ್ನು ಬಯಸುವಿರಲ್ಲವೆ?

**ಚಂದ್ರಶೇಖರ:**— ಅಹುದು, ಮುಂದೆ.

**ಕಮಲೆ:**— ತಾತನೇ! ಆ ದುಷ್ಟನೊಡನೆ ನನ್ನ ಲಗ್ನವನ್ನು ಮಾಡಿ, ಮಂಗಲ ಸೂತ್ರವನ್ನು ಕಟ್ಟಿ ನನ್ನ ಜೀವಕ್ಕೆ ಅಮಂಗಲ ಪರಿಣಾಮವನ್ನು ಮಾಡುವುದಕ್ಕೆ ಸಿದ್ಧರಾಗಿರುವರಲ್ಲ. ನಾನೇ ನಿಮಗೆ ಬೇಡಾಗಿದ್ದರೆ ನನ್ನನ್ನು

ಈ ಕಠಾರಿಯಿಂದ ಇರಿದುಕೊಲ್ಲಿರಿ. (ಎಂದು ತನ್ನ ಹತ್ತಿರ ಇದ್ದ ಕಠಾರಿಯನ್ನು ತಂದೆಯು ಕೈಯಲ್ಲಿ ಕೊಡಲು ಹೋಗುವಳು.)

**ಚಂದ್ರಶೇಖರ:**— (ಕಠಾರಿಯನ್ನು ತೆಗೆದುಕೊಳ್ಳದೆ, ಹಿಂದಕ್ಕೆ ಸರಿಸಿ) ಮೂರ್ಖಳೇ! ನಿನ್ನನ್ನು ಕಡಿದು ತುಂಡುತುಂಡು ಮಾಡಿದರೂ ಸಹ ನನಗೆ ಸಮಾಧಾನವಾಗುವುದಿಲ್ಲ. ಏನು ಮಾಡಲಿ?

**ಚಿತ್ರರೇಖೆ:**— ಮಹಾರಾಜರೇ! ಕಮಲೆಯ ಮೇಲೆ ಶಿಟ್ಟಾಗಬಾರದು. ಇವಳಂತಹ ಸದ್ಗುಣೆಯೂ ಸುಗುಣೆಯೂ ಯಾರೂ ಇಲ್ಲ.

**ಚಂದ್ರಶೇಖರ:**— ಅಧಮಳೇ! ಇವಳನ್ನು ವರ್ಣಿಸಬೇಡ. ಕಮಲೆಯು ನನ್ನ ಮಗಳೇ ಅಲ್ಲ. ಪೂರ್ವಜನ್ಮದ ವೈರತ್ವವನ್ನು ಸಾಧಿಸಲು ನನ್ನ ಮಗಳಾಗಿ ಹುಟ್ಟಿರುವಳು. (ಕಮಲೆಗೆ) ಕಮಲೇ! ಕುಮತಿರಾಜನನ್ನು ಲಗ್ನವಾಗುವಿಯೋ ಇಲ್ಲವೋ ಹೇಳು.

**ಕಮಲೆ:**— ತಂದೆಯೇ! ನಾನು ಉರಿಯಲ್ಲಿ ಹಾರಿ ಸಾಯುವುದಕ್ಕೆ ಸಿದ್ಧಳಿರುವೆನು. ಆದರೆ ಆ ಕಪಿಯನ್ನು ಮಾತ್ರ ಲಗ್ನವಾಗೆನು.

**ಚಂದ್ರಶೇಖರ:**— ನೀಚಳೇ! ಸಾಕು, ಸಾಕು. ನನ್ನ ಮಿತ್ರನ ನಿಂದೆಯನ್ನು ನನ್ನ ಮುಂದೆ ಮಾಡಬೇಡ. (ದೂತನಿಗೆ) ಜಯಸಿಂಹನೇ! ಈ ನನ್ನ ದುಷ್ಟಮಗಳನ್ನೂ ಅವಳ ಸಖಿಯರೊಡನೆ ಕಿಲ್ಲೆಯಲ್ಲಿ ಒಯ್ದಿಡು. ನನ್ನ ಅಪ್ಪಣೆಯಿಲ್ಲದೆ ಇವರನ್ನು ಹೊರಗೆ ಬಿಡಬೇಡ.

**ಕಮಲೆ:**— ಜನಕನೇ! ನಿನ್ನ ಆಜ್ಞೆಯು ನನಗೆ ಮಾನ್ಯವಾಗಿರುವುದು. ದೂತನೇಕೆ ನಾನೇ ಅಲ್ಲಿಗೆ ಹೋಗುವೆನು.

**ಚಂದ್ರಶೇಖರ:**— ಸಾಕು! ಸಾಕು! ಕಮಲೇ! ನನ್ನೊಡನೆ ಮಾತಾಡಬೇಡ. ನಿನ್ನ ಪ್ರತಿಯೊಂದು ಶಬ್ದವು ನನ್ನ ಮನಸ್ಸಿಗೆ ತಾಪವನ್ನು ಕೊಡುತ್ತಿರುವುದು. ಚಾಂಡಾಲಿಯೇ! ನೀನು ಕಿಲ್ಲೆಯಲ್ಲಿಯೇ ಇರು. ಇನ್ನು ಮೇಲೆ ನಾನು ನಿನ್ನ ಮುಖವನ್ನೇ ನೋಡುವುದಿಲ್ಲ. (ಎಂದು ಹೊರಟುಹೋಗುವನು.)

**ಜಯಸಿಂಹ:**— ಕಮಲಾದೇವಿಯವರೇ! ತಮ್ಮ ಹತ್ತಿರ ಇರುವ ಕಠಾರಿಯಿಂದ ನೀವು ನನ್ನನ್ನು ಇರಿದುಕೊಲ್ಲಿರಿ, ನಿರಪರಾಧಿಗಳಾದ ನಿಮ್ಮನ್ನು

ಕಿಲ್ಲೆಯಲ್ಲಿಡುವ ದುಷ್ಟಕೃತ್ಯವು ನನ್ನಿಂದಾಗದು. ಇಂಥ ಕಠಿನವಾದ ರಾಜಾಜ್ಞೆಯನ್ನು ಪಾಲಿಸುವುದಾದರೂ ಹೇಗೆ?

**ಕಮಲೆ:**— ಜಯುಸಿಂಹನೇ! ರಾಜರ ನಿಂದೆಯನ್ನು ಮಾಡದೆ ಅವರ ಆಜ್ಞೆಯಂತೆ ವರ್ತಿಸುವುದೇ ನಮ್ಮ ಧರ್ಮವಾಗಿದೆ. ನೀನು ನನ್ನ ಸಲುವಾಗಿ ಇಷ್ಟು ಮನಸ್ಸಿಗೆ ಹಚ್ಚಿಕೊಂಡು ತೊಳಲಬೇಡ. ನನ್ನ ಕೃತಿಗೆ ನಾನೇ ಬಾಧ್ಯಳು. ನೀನು ಮಿಡುಕಬೇಡ. ಸೂರ್ಯವಂಶಕುಲತಿಲಕನಾದ ರಾಮಚಂದ್ರನು ದೈವದಬಲೆಗೆ ಸಿಕ್ಕು ದುಃಖಬಟ್ಟನು. ಎಂದಮೇಲೆ ನಮ್ಮಂಥವರ ಪಾಡೇನು? (ಎಂದು ಸಖಿಯರನ್ನು ಕುರಿತು) ಸಖಿಯರೇ! ದುರ್ದೈವಿಯಾದ ನನ್ನನ್ನು ಕೂಡಿದ್ದರಿಂದಲೇ ನಿಮ್ಮ ಪಾಲಿಗೆ ಕಾರಾಗೃಹವಾಸವನ್ನು ಅನುಭವಿಸುವ ಕಠಿನ ಪ್ರಸಂಗವು ಬಂದೊದಗಿತು; ಉಪಾಯವಿಲ್ಲ. ಉಶ್! ದೈವದ ಮುಂದೆ ಯಾರ ಆಟವೂ ಸಾಗದು. ಹಾಯ್!! ಹಾಯ್!!! ಏನುಮಾಡಲಿ? ಚಿತ್ರರೇಖೇ! ಕೋಕಿಲೇ! ಪಾಪಿಯಾದ ನನ್ನನ್ನು ಕ್ಷಮಿಸಿರಿ. ಹಾಗೂ ನನ್ನ ತಂದೆಯ ಮೇಲೆ ಸಿಟ್ಟಾಗಬೇಡರಿ. ಇಷ್ಟೇ ನಿಮಗೆ ನನ್ನ ಪ್ರಾರ್ಥನೆಯು.

**ಕೋಕಿಲೆ:**— ನಮ್ಮಿಬ್ಬರ ಸಲುವಾಗಿ ಚಿಂತಿಸಬೇಡ. ನೀನು ಎಲ್ಲಿ ಇರುವಿಯೋ, ಅಲ್ಲಿಯೇ ನಾವು. ನೀನು ಕಷ್ಟವನ್ನನುಭವಿಸುವಾಗ ನಾವು ಸುಖದಿಂದ ಇರುವುದು ನ್ಯಾಯವೇ? ಗೆಳತಿಯರು ಸಂಕಟಸಮಯದಲ್ಲಿದ್ದಾಗ ಆನಂದವನ್ನು ಬಯಸುವವರು ಗೆಳತಿಯರಲ್ಲ. ಅವರು ಬೀದಿಯಲ್ಲಿ ಬಿದ್ದ ಬಂಡೆಗಳಿಗೆ ಸಮರಾಗಿಹರು. ಸಖಿಯೇ! ರಾಜಾಜ್ಞೆಯನ್ನು ಮೀರುವುದು ಪಾಪವೆಂದು ನೀನು ಹೇಳಿದೆಯಲ್ಲ.

**ಕಮಲೆ:**— ಅಹುದು. ನಿಮ್ಮ ಇಷ್ಟದಂತೆಯಾಗಲಿ. ಜಯುಸಿಂಹನೇ ನಮ್ಮನ್ನು ಕಿಲ್ಲೆಯ ಕಡೆಗೆ ಕರೆದುಕೊಂಡು ನಡೆ. ರಾಜಾಜ್ಞೆಯನ್ನು ಮೀರುವುದು ನಮ್ಮ ಕರ್ತವ್ಯವಲ್ಲ.

**ಜಯುಶಿಂಹ:**— ಕಮಲಾದೇವಿಯುವರೇ! ತಮ್ಮ ರಾಜನಿಷ್ಠೆಯು ಕೊಂಡಾಡತಕ್ಕದ್ದಾಗಿದೆ. ಈ ತಮ್ಮ ನಿಷ್ಠೆಯೇ ತಮ್ಮೆಲ್ಲರ ಇಚ್ಛೆಯನ್ನು ಪೂರ್ಣ ಮಾಡುವುದು. ನಡೆಯಿರಿನ್ನು.

**ಕಮಲೆ:**— ಹಾಗೇ ಆಗಲಿ. ಹೇ! ದೇವಾ! ದೀನದಯಾಳಾ! ಕೋದಂಡ ರಾಮಾ! ಇನ್ನು ಮೇಲೆ ನೀನೇ ನಮ್ಮನ್ನು ರಕ್ಷಿಸುವವನು.

**೨೨ ಪದ.** ಧಾಟಿ:—(ಕರ್ಣಾಟಕ ಭೈರವಿ.)

ನಿನ್ನ ಚರಣವನ್ನು ತೋರೋ ಶ್ರೀರಾಮನೆನ್ನ ಪ್ರಾಣ |
ವನ್ನು ಕಾಯೊ | ಘನ್ನಮಹಿಮನೇ || ಪ ||
ತರುಣಿ ನಾನು ತರಣಿವಂಶದಾ | ಭರಣಮಣಿಯೆ ತರುಣಿಪಾಲ
ಚರಣದಾಸಿನಾಥರುಣಿಯಲ್ಲಿ | ಶರಣಚಿಂತಾಹರಣ ನಿನಗೆ |
ಶರಣರೆಲ್ಲ ಕರುಣದಿಂದ ಹರಣವಿರಿಸು | ಮರಣರಹಿತ ಧರಣಿ
ಪಾಲ || ೧ ||

ಜಯಸಿಂಹನೇ! ನಡೆ ಇನ್ನು. (ಎಂದು ತನ್ನ ಸಖಿಯರೊಡನೆ ಹೊರಟು ಹೋಗುವಳು.)

**ಎಲ್ಲರೂ ಹೋಗುವರು.**

## ೨ನೆಯ ಅಂಕವು ಮುಗಿದುದು.

ಶ್ರೀರಾಮ

॥ ॐ ॥

॥ श्रीराम ॥

# ೩ನೆಯ ಅಂಕ.



ಸ್ಥಳ:—ಕಿಲ್ಲೆಯ ಮುಂದಿನ ಅಂಗಳ.

ಪಾತ್ರಗಳು:—**ಚಿತ್ರರೇಖೆ, ಕೋಕಿಲೆ, ಮಂಜುಘೋಷೆ ಮತ್ತು ಕಮಲೆಯು.**

037263

ಬರುವರೀತಿಯು:—(ಸುತ್ತಲು ಹೂವಿನ ಗಿಡಗಳಿಂದಲೂ ಕಾರಂಜಿಗಳಿಂದಲೂ ಸುಶೋಭಿತವಾದ ಅಂಗಳದ ಮಧ್ಯದಲ್ಲಿ ಶೋಭಿಸುವ ಲತಾಮಂಟಪದಲ್ಲಿರುವ ಶಿಲಾತಲದಮೇಲೆ ಕಮಲೆಯು ಮಲಗಿರುವಳು. ಹತ್ತಿರ ಇಬ್ಬರು ಸಖಿಯರು ಕುಳಿತಿರುವರು. ಕಾರಂಜಿಗಳು ಹಾರುತ್ತಿರಬೇಕು. ಚಂದ್ರನೂ ಚಿಕ್ಕೆಗಳೂ ಕಾಣುವ ವ್ಯವಸ್ಥೆಯನ್ನು ಮಾಡತಕ್ಕದ್ದು.)

**ಕೋಕಿಲೆ:**—ಚಿತ್ರರೇಖೇ! ನಮ್ಮ ಸಖಿಯ ಮುಖಕಮಲವು ಎಷ್ಟು ಕುಂದಿರುವದು, ನೋಡಿದೆಯಾ? ಇವಳ ಮನೋಹರವಾದ ಅಧರಬಿಂಬವು ಬಾಡಿಹೋಗಿದೆ. ಚಿಂತೆಯನ್ನು ಮಾಡಿ ಮಾಡಿ ಇವಳ ದೇಹಕಾಂತಿಯು ಕುಂದಿಹೋಗಿದೆ. ನಮ್ಮೊಡನೆಯೂ ವಿಶೇಷ ಮಾತಾಡದೆ, ಯಾವಾಗಲೂ ನಿಟ್ಟುಸುರು ಬಿಡುತ್ತ ಕುಳಿತಿರುವಳು. ಸಖೀ! ಇವಳ ಈ ಅವಸ್ಥೆಯನ್ನು ನೋಡಿ ನನ್ನ ಮನಸ್ಸಿಗಂತೂ ಸಮಾಧಾನವಾಗಲೊಲ್ಲದು. (ತುಸ ವಿಚಾರಿಸಿ) ಚಂಪಾರಣ್ಯದಲ್ಲಿ ಹಂಸರಾಜನನ್ನು ನೋಡಿದಂದಿನಿಂದ ಇವಳು ನಮ್ಮೊಡನೆ ಮೊದಲಿನಂತೆ ಮಾತಾಡುವುದಿಲ್ಲ. ಇದರ ಕಾರಣವೇನಿರಬಹುದು?

**ಚಿತ್ರರೇಖೆ:**—ತಿಳಿದೇ ಇದೆ. ಅವಳ ಅನುರಾಗವು ಹಂಸರಾಜನಲ್ಲಿ ನಟ್ಟು ಹೋಗಿದೆ. ಅವಳ ತಂದೆಯು ಅದಕ್ಕೆ ಸಮ್ಮತಿಸುವುದಿಲ್ಲವೆಂಬ ಚಿಂತೆಯೇ ಚಿಂತೆಯು. ನೀನು ಬೇಕಾದರೆ ಅವಳನ್ನೇ ಆ ಕಾರಣದ ಬಗ್ಗೆ ವಿಚಾರಿಸು.

**ಕೋಕಿಲೆ:**— ಕಮಲೇ! ಜನಕನು ನಿನ್ನನ್ನು ಭದ್ರವಾದ ಕೋಟೆಯಲ್ಲಿ ಇಟ್ಟಿರುವನಲ್ಲ; ಅದಕ್ಕಾಗಿ ಚಿಂತಿಸುವಿಯಾ? ಅಥವಾ ಯಾವುದಾದರೊಂದು ಮನೋವ್ಯಥೆಯು ನಿನ್ನನ್ನು ಈ ಪರಿಯಾಗಿ ತೊಳಲಿಸುವುದೋ? ಹೇಳು. ಮಿತ್ರರಲ್ಲವೆ ದುಃಖಗಳನ್ನು ತಗ್ಗಿಸಿ, ಸುಖವನ್ನು ಹೆಚ್ಚಿಸುವವರು. ಮರೆ ಮಾಜದೆ ನಿನ್ನ ಅಂತರಂಗವನ್ನು ಹೇಳು. (ಎಂದು ಆಕೆಯು ಹತ್ತಿರ ಕುಳಿತುಕೊಂಡು ಪ್ರೇಮವನ್ನು ಸೂಚಿಸುತ್ತ) ಏನಾದರೂ ತಕ್ಕ ಉಪಾಯವನ್ನು ಚಿಂತಿಸೋಣವಂತೆ ಸಖೀ!

**೨೩ ಪದ.** ಧಾಟಿ:—(ನಡಿ ಸಖಿ ಕುಂಜ ಬನಾದೊಳು ಪೋಗುನು.)

ನುಡಿ ಸಖಿ ನಿನ್ನ ಮನ | ದೊಳು ಭೇದಿಪ ತಾಪವದಾವುದೆ
|| ಪ ||
ಅನುದಿನವಿನಿಯನ | ನೆನೆಯುತ ಬಲುಬಣಿದೆ ಎಮ್ಮೊಳು
ನಿಮಿಷವು | ಇನಿನುಡಿ ನುಡಿಯದೆ || ೧ ||
ಉಲಿದುಮೆರೆಯುತಿಹ | ಅಲಿಗಳ ಜರೆಯುತ ನಲಿದಾಡುವ |
ಸುಳಿಗುರುಳನುಸವರುತ || ೨ ||

ಹೇಳು, ಹೇಳು ನಾವು ನಿನ್ನ ಗೆಳತಿಯರಲ್ಲವೆ? ಈ ಪರಿ ನಮ್ಮನ್ನು ಕಾಡಬೇಡ?

**ಕಮಲೆ:**— ಕೋಕಿಲೇ! ಹೀಗೆ ಕೇಳಿ, ವೃಥಾ ನನ್ನ ಮನಸ್ಸಿನ ತಾಪವನ್ನು ಹೆಚ್ಚಿಸಬೇಡ. ನನಗೆ ಬಹು ತಾಪವಾಗಿದೆ. ನನ್ನ ಮನಸ್ಸಿಗೆ ಯಾವುದೂ ಬೇಕಾಗಿಲ್ಲ.

**ಕೋಕಿಲೆ:**— ಅದನ್ನು ಕಂಡೇ ನಾವಿಬ್ಬರು ಚಂದ್ರಿಕಾಮೋದವನ್ನು ಅನುಭವಿಸಲು ನಿನ್ನನ್ನು ಇಲ್ಲಿಗೆ ಕರೆದುಕೊಂಡು ಬಂದೆವು. ಇನ್ನು ಮೇಲೆ ನೀನು ಆಕಾಶಮಾರ್ಗದಲ್ಲಿ ವಿರಾಜಿಸುವ ಚಂದ್ರನ ಸೌಂದರ್ಯವನ್ನೂ, ಈ ನಿಶೆಯ ಶೋಭೆಯನ್ನೂ ನೋಡಿದರೆ ನಿನ್ನ ಮನೋವ್ಯಥೆಯು ಕಡಿಮೆಯಾಗುವುದು.

**ಕಮಲೆ:**— ಈ ಯಾವತ್ತೂ ಇಂದ್ರಿಯಗಳ ಚಲನಕ್ಕೆ ಕಾರಣವಾದ

ನನ್ನ ಮನಸ್ಸೇ ಚಂಚಲವಿದ್ದ ಸ್ಥಿತಿಯಲ್ಲಿ ನಾನು ಈ ಸೃಷ್ಟಿಸೌಂದರ್ಯವನ್ನೂ ಆಕಾಶದ ಶೋಭೆಯನ್ನೂ ನೋಡಿ ಹೇಗೆ ಸಂತೋಷ ಬಡಲಿ? ಮೇಲಾಗಿ ಈ ಚಂದ್ರನು ಮಹಾ ದುಷ್ಟನು. ಇವನಿಗೆ ಸಾರಾಸಾರ ವಿಚಾರವೇ ಇಲ್ಲ. ಸಖಿಯರೇ! ವಿರಹಿಗಳಂತೂ ಇವನ ಮೇಲೆ ಬೆಂಕಿಯನ್ನೇ ಕಾರುವರು.

**ಚಿತ್ರರೇಖೆ**:—(ಆತ್ಮಗತಂ) ಹಾ! ಹಾ!! ಈಗ ಮಾತ್ರ ಚೆನ್ನಾಗಿ ತಿಳಿಯಿತು. ಇವಳಿಗಾದ ವ್ಯಥೆ ಎಲ್ಲ ಹಂಸರಾಜನ ವಿರಹತಾಪದಿಂದಲೇ; ಅದಕ್ಕಂತೇ ಇವಳು ನಮ್ಮೊಡನೆ ವಾಡಿಕೆಯಂತೆ ವರ್ತಿಸಲಿಲ್ಲ. ಒಳ್ಳೇದು (ಪ್ರಕಟವಾಗಿ) ಸಖಿಯೇ! ಶಾಂತಕಿರಣನಾದ ಇವನಿಂದ ವಿರಹಿಗಳಿಗೆ ದುಃಖವಾದರೂ ಹೇಗಾಗುವ್ರದು? ಮೇಲಾಗಿ ಈ ಪ್ರಪಂಚದ ತೊಂದರೆಗೆ ಬೇಸತ್ತ ಜನರು ಬೆಳದಿಂಗಳಲ್ಲಿ ಬಹು ಉಲ್ಲಾಸದಿಂದ ಕುಳಿತು, ತಮಗಾದ ಶ್ರಮವನ್ನು ದೂರ ಮಾಡಿಕೊಳ್ಳುವುದು ಸುಪ್ರಸಿದ್ಧವಾಗಿದೆ. ಕಮಲೇ! ಬಹು ಪ್ರಖರವಾದ ಕಾಲಕೂಟದ ಸೇವನದಿಂದ ಶ್ರೀ ಮಹಾದೇವನಿಗಾದ ದಾಹವನ್ನು ಈ ಉಡುರಾಜನು ಕಡಿಮೆ ಮಾಡಿದ್ದು ನಿನಗೆ ವಿದಿತವಿಲ್ಲವೆ?

**ಕಮಲೆ**:—ನೀನು ಹೇಳುವುದೆಲ್ಲ ನಿಜವು. ಆದರೆ ಈ ಚಂದ್ರನು ಶಾಂತನಿದ್ದರೂ ವಿರಹಿಗಳನ್ನು ಮೊದಲಿನಿಂದಲೂ ಕಾಡುತ್ತ ಬಂದಿರುವನು. ಈ ದುಷ್ಟನೇ ವಿರಹತಾಪದಿಂದ ಬಳಲುತ್ತ ಶಿಲಾತಲದ ಮೇಲೆ ಮಲಗಿದ ಆ ಪುಂಡರೀಕನ ಪ್ರಾಣವನ್ನು ಹರಣಮಾಡಿದನು. ಅದರಲ್ಲಿ ಸ್ತ್ರೀಯರ ಮೇಲಂತೂ ಇವನ ಕಟಾಕ್ಷವು ಬಹು ತೀಕ್ಷ್ಣ. ಮೇಲಾಗಿ ಇವನಿಗೆ ಅಬಲೆಯರಾದ ಸ್ತ್ರೀಯರನ್ನು ಕಾಡಬಾರದೆಂಬ ಎಚ್ಚರವೆಲ್ಲಿಯದೆ? ಗೆಳತಿಯಿರಾ! ಕೋಪಿಗಳಾದ ವಿರಹಿಗಳ ದೃಷ್ಟಿಯು ತಾಕಿ, ತಾಕಿ, ಇವನ ಅಂಗವು ಸುಟ್ಟುಹೋಗಿ, ಅಲ್ಲಿ ಶಾಶ್ವತ ಕಲೆಗಳುಂಟಾದರೂ ಸಹ ಇವನಿಗೆ ನಾಚಿಕೆಯೇ ಇಲ್ಲ ನೋಡಿರಿ. (ಚಂದ್ರನ ಕಡೆಗೆ ನೋಡುತ್ತ ಕರುಣ ಸ್ವರದಿಂದ) ಎಲೈ ಉಡುರಾಜನೇ! ನೀನು ಬಲಿಷ್ಠನಾದ ಪುರುಷನಿದ್ದು, ಅಬಲೆಯಾದ ನನ್ನನ್ನು ಕಾಡುವುದು ನಿನಗೆ ಎಂದಿಗೂ ಉಚಿತವಲ್ಲ. ದೀನಳೂ ಅಬಲೆಯೂ ಆದ ನನ್ನನ್ನು ಹೀಗೆ ಕಾಡುವುದರಿಂದ ನಿನಗೆ ಬರುವ ಲಾಭವಾದರೂ ಆವುದು?

ರಾಗ:— ಜಿಂಝೋಟಿ

**೨೪ ಪದ.** ಧಾಟಿ.—(वरिगारिबा वीरा जी अबला)

ತರುಣಿಯನೀ ಕಾಯೋ ಬಾ ಸದಯಾ |
ವರಮೃಗಾಂಕಾನೀ ತೋರುದಯ || ಪ ||
ಬಾಡಿದಕೋಮಲ ತನುವನು ನೋಡಿ |
ಬಿಡುಪಂಥವನೀ ತಾರಾನಾಥಾ || ೧ ||
ಅಬಲೆಯಕಾಡುತ ರಾಜಿಪುದೇ ಸದಾ |
ನಭೋಮಾರ್ಗದೊಳು ಶಾಂತಾಕಾರಾ || ೨ ||

ಇನ್ನು ಮೇಲೆ ನೀನು ನಿನ್ನ ಮನಸ್ಸಿಗೆ ತೋರಿದಂತೆ ಮಾಡು.

**ಕೋಕಿಲೆ:**— ಅದಿರಲಿ, ವಿರಹಿಗಳು ದುಷ್ಟನಾದ ಚಂದ್ರನ ಸಮೂಲ ನಾಶವನ್ನು ಏಕೆ ಮಾಡಲಿಲ್ಲ?

**ಕಮಲೆ:**— ಅಯ್ಯೋ!!! ಕೋಕಿಲೇ! ಏನು ಹೇಳಲಿ. ಸಮುದ್ರರಾಜನು ತನ್ನ ಮಗನಾದ ಚಂದ್ರನನ್ನು ಅಗ್ನಿಯು ಸುಡಬಾರದೆಂದು ಅವನ ದೇಹದಲ್ಲಿ ಹಿಮವನ್ನು ತುಂಬಿರುವನು. ಶ್ರೀ ಲಕ್ಷ್ಮೀದೇವಿಯು ತನ್ನ ತಮ್ಮನು ಚಿರಜೀವಿಯಾಗಬೇಕೆಂಬ ಅಭಿಮಾನದಿಂದ ಅವನ ಕಿರಣಗಳಲ್ಲಿ ಅಮೃತವನ್ನು ತುಂಬಿರುವಳು. (ಚಂದ್ರನನ್ನು ನೋಡುತ್ತ) ಈ ಚಂದ್ರನಿಗೆ ದೊಡ್ಡವರ ಸಹಾಯವಿಲ್ಲದಿದ್ದರೆ ಇವನು ಸತ್ತು ಎಷ್ಟೋ ವರ್ಷಗಳಾಗಿ ಹೋಗುತ್ತಿದ್ದುವು. ಇದರ ಮೇಲಿಂದ ದುಷ್ಟ ಜನರು ಸಜ್ಜನರ ಸಹವಾಸದಲ್ಲಿದ್ದರೂ ಕೆಟ್ಟ ಕೃತಿಗಳನ್ನು ಮಾಡಿ, ತಮ್ಮ ಕೀರ್ತಿಗೆ ಕಲಂಕವನ್ನು ತಂದುಕೊಳ್ಳುವರೆಂಬುವುದಕ್ಕೆ ಇದೇ ಉಡುರಾಜನು ಸಾಕ್ಷಿಯಾಗಿರುವನು. (ಕೋಪದಿಂದ) ಏ! ಚಾಂಡಾಲಾ! ಅಧಮಾಧಮಾ! ಇನ್ನಾದರೂ ಸ್ತ್ರೀಯರನ್ನು ಕಾಡುವ ನಿಂದ್ಯ ಕೆಲಸವನ್ನು ಬಿಟ್ಟು ಬಿಡು. ಇಲ್ಲದಿದ್ದರೆ ನಿನ್ನ ಗತಿಯು ನೆಟ್ಟಗಾಗದು ಕಂಡೆಯಾ?

**ಚಿತ್ರರೇಖೆ:**— ಚಂಪಾರಣ್ಯದಲ್ಲಿ ನಿನ್ನ ಮೇಲೆ ಬಂದ ಸಂಕಟವನ್ನು ದೂರ ಮಾಡಿದ ಹಂಸರಾಜನೇ ಈಗ ನಿನ್ನ ಮನತಾಪವನ್ನು ದೂರ ಮಾಡು

ವನು. ನೀನು ಸುಮ್ಮನೆ ಚಂದ್ರನ ಮೇಲೆ ಸಿಟ್ಟಾದರೆ ಅವನೇನು ಮಾಡು ವನು?

**ಕೋಕಿಲೆ:**— ಕಮಲೇ! ಚಿತ್ರರೇಖೆಯು ಸತ್ಯವಿದ್ದ ಸಂಗತಿಯನ್ನು ನಿನ ಗೆ ತಿಳಿಸಿರುತ್ತಾಳೆ. ನೀನು ಯಾರ ಸಲುವಾಗಿ ಈ ಭದ್ರವಾದ ಕೋಟೆಯಲ್ಲಿ ದುಃಖ ಪಡುವಿಯೋ ಆ ಮಹಾತ್ಮನೇ ನಿನ್ನ ಸಂರಕ್ಷಣೆಯನ್ನು ಮಾಡದಿದ್ದರೆ, ಮತ್ತೊಬ್ಬರಾರು ಮಾಡುವರು?

**ಕಮಲೆ:**— ಅಹುದು. ಆ ಮಹಾತ್ಮನೇ ನನ್ನನು ರಕ್ಷಿಸುವವನು. ಈ ದೀನ ದಾಸಿಯನ್ನು ಮರೆಯ ಬೇಡ. ಪ್ರಾಣನಾಥಾ! ನಾನು ನಿನ್ನನ್ನು ಮನಃಪೂರ್ವಕ ವರಿಸಿದ ಪ್ರಿಯಳಲ್ಲವೆ? ನನ್ನನ್ನು ನಿನ್ನ ಹೊರತು ಮತ್ತೆ ಯಾರು ಕಾಪಾಡುವರು? ದುಷ್ಟನಾದ ಮನ್ಮಥನು ನನ್ನ ಮೇಲೆ ಬಾಣಗ ಳನ್ನು ಎಡಬಿಡದೆ ಬಿಡುತ್ತಿರುವನು. ಈ ಪಾಪಿ ಚಂದ್ರನು ಅವನಿಗೆ ಬೆಂಬಲ ವಾಗಿ ನಿಂತಿಹನು. ಅನಾಥಳಾದ ನನ್ನನ್ನು ಈಪರಿ ದೂಡುವುದು ಕ್ಷತ್ರಿಯರ ಧರ್ಮವೆ? ಮನೋಹರಾ!

**೨೫ಪದ:**— ಧಾಟಿ:— (**आन बान जीयामिलांग**)

ಕಾಮಬಾಣ ಸಹಿಸಲಾರೆ | ಪ್ರಾಣಕಾಂತಾ || ಪ ||
ತಡೆಯಲಾರೆ ಕಾಡುತಿಹನು | ಕಾಡು ಹೃದಯ ನೋಡು ಸದಾ
ಕಿಡಿಗಳನುರೆ ಸುರಿಸುವನು | ಬಿಡವೆ ಕುಸುಮಬಾಣ || ೧ ||

ಇನ್ನಾದರೂ ನನ್ನ ವಿಷಯವಾಗಿ ಅಂತಃಕರಣವು ಬಾರದೆ ಹೋಯಿತೇ? ಉಪಾಯವಿಲ್ಲ. ನಾನು ಕೇದಗೆಯ ಬನದಲ್ಲಿ ಸಂಕಟಕ್ಕೊಳಗಾದಾಗ ನೀವು ನನ್ನ ಸಖಿಯರ ಆರ್ತಸ್ವರವನ್ನು ಕೇಳಿ, ನನ್ನ ರಕ್ಷಣೆಯನ್ನು ಮಾಡಿದಿರಿ. ಈಗ ನಾನು ಇಷ್ಟು ಹೇಳಿಕೊಂಡದ್ದೆಲ್ಲ ಹೀಗೆ ವ್ಯರ್ಥವಾಗ ಬೇಕೆ? ನೀವೇ ನನ್ನ ಮೇಲೆ ಇಷ್ಟು ನಿರ್ದಯರಾದ ಮೇಲೆ ನಾನು ಬದುಕಿಯಾದರೂ ಮಾಡುವು ದೇನು? (ಎಂದು ಸಖಿಯರಿಗೆ) ಸಖಿಯರೇ! ಇನ್ನು ಮೇಲೆ ನಾನು ಇಲ್ಲಿ ನಿಲ್ಲ ಲಾರೆನು. (ಎಂದು ಮುಂವಕ್ಕೆ ಹೋಗಹತ್ತುವಳು.)

**ಚಿತ್ರರೇಖೆ:**— (ಕಮಲೆಯ ಹತ್ತಿರ ಧಾವಿಸುತ್ತ ಹೋಗಿ; ಅವಳ ಕೈ

ಹಿಡಿದು) ಹೀಗೇಕೆ ನನ್ನ ಮೇಲೆ ಸಿಟ್ಟಾಗುವಿ? ಈ ಶಿಲಾತಲದಮೇಲೆ ಕುಳಿತು ನನ್ನೊಡನೆ ಸ್ವಲ್ಪ ಮಾತನಾಡು.

**ಕಮಲೆ**:—ಸಖಿಯರೇ! ನಾನು ಇಲ್ಲಿ ಇರಲಾರೆನು. ಕೋಟೆಯೊಳಗೆ ಹೋಗುವೆನು. ಸರಿಯಿರಿ. ನನ್ನನ್ನು ತಡವ ಬೇಡರಿ. ನನ್ನ ದೇಹವನ್ನು ಬಳಲಿಸುತ್ತಿರುವ ಈ ದುಷ್ಟ ಚಂದ್ರನ ಎದುರಿಗೆ ಕುಳಿತುಕೊಳ್ಳಲು ನನ್ನಿಂದ ಸರ್ವಥಾ ಆಗದು.

**ಕೋಕಿಲೆ**:—ಚಿತ್ರರೇಖೇ! ಏನು ಮಾಡಲಿ! ಈ ಚಂದ್ರನನ್ನು ಹಿಡಿದು ದಂಡಿಸುವುದಾದರೂ ಹೇಗೆ? ಆತನು ದೂರದಲ್ಲಿರುವನಲ್ಲ!!

**ಚಿತ್ರರೇಖೆ**:—ಚಂದ್ರನನ್ನು ಹಿಡಿದು ಕೊಡುವುದು ನನ್ನನ್ನು ಕೂಡಿತು.

**ಕೋಕಿಲೆ**:—ಮೂಢಳಂತೆ ಮಾತಾಡಬೇಡ. ಚಂದ್ರನನ್ನು ಹಿಡಿಯುವುದಾದರೂ ಹೇಗೆ?

**ಚಿತ್ರರೇಖೆ**:—ಏಕೆ? ದರ್ಪಣದ ಸಹಾಯವಿಲ್ಲವೆ?

**ಕಮಲೆ**:—ದರ್ಪಣವೆಂದರೇನು?

**ಚಿತ್ರರೇಖೆ**:—ಕನ್ನಡಿಯು.

**ಕಮಲೆ**:—ಒಳ್ಳೇದು; ಇನ್ನು ಅವನನ್ನು ಕೊಲ್ಲುವುದು ಹೇಗೆ?

**ಚಿತ್ರರೇಖೆ**:—ನೀನು ಕನ್ನಡಿಯನ್ನು ಹಿಡಿದು, ಅದರಲ್ಲಿ ನೋಡಹತ್ತಿದಿಯೆಂದರೆ ಆ ಸ್ತ್ರೀಲಂಪಟನಾದ ಚಂದ್ರನು ನಿನ್ನ ಮುಖಕ್ಕೆ ಮುದ್ದುಕೊಡಲು ಧಾವಿಸಿ ಬರುವನು. ಆಗ್ಗೆ ನೀನು ಸ್ವಲ್ಪ ಹಿಂದಕ್ಕೆ ಸರಿದು; ನಿನ್ನ ಕಠಾರಿಯಿಂದ ಅವನನ್ನು ಇರಿದು ಕೊಲ್ಲು. ಇಷ್ಟೇಕೆ ಯೋಚನೆಯನ್ನು ಮಾಡುವೆ? (ಎಂದು ತನ್ನ ಹತ್ತಿರ ಇದ್ದ ಕನ್ನಡಿಯನ್ನು ಕೊಡುವಳು.)

**ಕಮಲೆ**:—(ಕನ್ನಡಿಯನ್ನು ತೆಗೆದುಕೊಂಡು ನೋಡುವಾಗ ಅದರಲ್ಲಿ ತನ್ನ ಮುಖವನ್ನೂ ಚಂದ್ರನ ಬಿಂಬವನ್ನೂ ನೋಡಿ ಸಿಟ್ಟಿನಿಂದ) ಏ! ಅಧಮಾಧಮಾ! ಕಾಮಾಂಧಾ! ಇನ್ನೂ ಸ್ತ್ರೀಯರ ಸಮೀಪಕ್ಕೆ ಬರುವ ಹವ್ಯಾಸವನ್ನು ಬಿಡುವುದಿಲ್ಲವೇ? ನಿಲ್ಲು, ನಿಲ್ಲು, ಎಲ್ಲಿಗೆ ಓಡಿಹೋಗುವೆ? ನೋಡು. ಈಗ ನಾನು ನಿನ್ನನ್ನು ಕೊಲ್ಲುತ್ತೇನೆ. (ಎಂದು ಕಠಾರಿಯನ್ನು ಚಂದ್ರನಿಗೆ

ಚುಚ್ಚಲು ಹೋಗುವಳು.)

**ಚಿತ್ರರೇಖೆ**:—(ಆತ್ಮಗತಂ) ಇದೇನು!! ಕಮಲೆಗೆ ಹುಚ್ಚು ಹಿಡಿಯಿತೋ! ಕನ್ನಡಿಯಲ್ಲಿ ಕಾಣುವ ಚಂದ್ರನು ನಿಜವಾದ ಚಂದ್ರನೆ!

**ಕೋಕಿಲೆ**:—(ಓಡುತ್ತ ಬಂದು, ಕಮಲೆಯ ಕೈ ಹಿಡಿದು) ದಯಮಾಡಿ ಈ ಚಂದ್ರನನ್ನು ಕೊಲ್ಲಬೇಡ. ಇವನನ್ನು ಕೊಂದರೆ ನಿನ್ನ ಮುದ್ದಾದ ಮುಖಕ್ಕೆ ಉಪಮೆಯನ್ನು ಕೊಡುವ ಪದಾರ್ಥವೇ ಈ ಜಗತ್ತಿನಲ್ಲಿ ಇಲ್ಲದಂತಾಗುವುದು.

**ಚಿತ್ರರೇಖೆ**:—ಕಮಲೇ! ಈ ಕನ್ನಡಿಯಲ್ಲಿ ಕಾಣುವ ಚಂದ್ರನ ಬಿಂಬವನ್ನು ಛೇದಿಸುವುದರಿಂದ ಕೈಯೊಳಗಿನ ಕನ್ನಡಿಯು ಒಡೆದು ಹೋಗುವುದಲ್ಲದೆ ಆ ಅಧಮನಿಗೆ ಸ್ವಲ್ಪ ಸಹ ಘಾಯವಾಗದು. ಆಕಾಶದಲ್ಲಿ ವಿರಾಜಿಸುವ ಚಂದ್ರನು ಇಲ್ಲಿಗೆ ಬರುವುದು ಹೇಗೆ? ನೀನು ಇವನನ್ನು ಕೊಲ್ಲುವುದು ಹೇಗೆ?

**ಕಮಲೆ**:—ಸಖಿಯರೇ! ನೀವೇ ನನಗೆ ಅವನನ್ನು ಶಿಕ್ಷಿಸುವುದಕ್ಕೆ ಈ ಉಪಾಯವನ್ನು ಹೇಳಿಕೊಟ್ಟು ಈಗ ನನ್ನನ್ನು ನಿಂದಿಸುವಿರಿ. ಇನ್ನು ನಾನು ನಿಮ್ಮ ಉಪದೇಶವನ್ನು ಕೇಳೆನು. ನನ್ನ ಪ್ರಾಣಪ್ರಿಯನಾದ ಹಂಸರಾಜನಿಗೆ ಹೇಳಿಕೊಳ್ಳುವೆನು. ಆ ಮಹಾತ್ಮನೇ ಚಂದ್ರನಿಗೆ ತಕ್ಕ ಶಿಕ್ಷೆಯನ್ನು ಕೊಡುವನು. ಪ್ರಾಣಪ್ರಿಯಾ!

ರಾಗ:—ಕಾಂಬೋಧಿ.

**೨೬ ಪದ.** ಧಾಟಿ:—(ಇಂದಿರಾಧವ । ನೊಂದೆನೈಭವ । ಬಂಧಬಿಡಿಸೆಲೊ)

ಮಂದಹಾಸ । ದಿಂದ ಮೆರೆವ । ಸುಂದರಾಂಗನೆ ॥ ಪ ॥
ಎನ್ನ ತಾಪವನ್ನು ನೀಗಿ । ನಿನ್ನಯ ಸ್ಥಳವನ್ನು । ಎನಗೆ ತೋರು
ತಿನ್ನು । ಎನ್ನ ಕಾವುದು ನಾಥನೆ ಬೇಗೆಲೊ ॥ ೧ ॥
ಹೊಡೆದು ಬಾಣ ಕುಸುಮ ಬಾಣ । ಕಾಡುತಿಹನು
ನೋಡು ಪತಿಯೆ । ಬಾಡಿ ಪೋದೆ । ಬೇಡಿಕೊಂಬೆ ಕಾಡ
ಬೇಡೆಲೊ ॥ ೨ ॥

ಕಾಮನು ನನ್ನನ್ನು ಈ ಸ್ಥಿತಿಗೆ ತಂದರೂ ನೀನು ಈ ರೀತಿ ಉದಾಸೀನ ಮಾಡಬಹುದೆ? ದಯವನ್ನು ತೋರು.

**ಮಂಜುಘೋಷೆ:**—(ತೆರೆಯೊಳಗಿಂದ ಬಂದು) ದೇವಿಯವರೇ! ತಮ್ಮನ್ನು ಅರಮನೆಗೆ ಕರೆದುಕೊಂಡು ಬರುವುದಕ್ಕೆ ರಾಜಾಜ್ಞೆಯಾಗಿದೆ.

**ಕಮಲೆ:**—ರಾಜಾಜ್ಞೆಯು ಶಿರಸಾವಂದ್ಯವು. ಚಿತ್ರರೇಖೇ! ಕೋಕಿಲೇ! ನೀವು ಇಲ್ಲಿಯೇ ಇರ್ರಿ. ನಾನು ಮಂಜುಘೋಷೆಯೊಡನೆ ಅರಮನೆಗೆ ಹೋಗಿಬರುವೆನು. (ಎಂದು ಅವಳೊಡನೆ ಹೋಗುವಳು.)



## ೨ನೆಯ ಪ್ರವೇಶವು.



### ಸ್ಥಳ:—ಚಂಪಕನಗರಕ್ಕೆ ಹೋಗುವ ಹಾದಿಯು.

### ಪಾತ್ರಗಳು:—ಕುಮತಿರಾಜ ಮತ್ತು ವಿಚಿತ್ರಸೇನನು.

ಬರುವರೀತಿಯು:—(ಕುಮತಿಯು ಬಹು ಶೃಂಗಾರದಿಂದ ವಿಚಿತ್ರಸೇನನ ಸಂಗಡ ನಗುತ ಬರುವನು.)

**ವಿಚಿತ್ರಸೇನ:**—ಮಿತ್ರಾ! ಚಂದ್ರಶೇಖರನು ನಮ್ಮ ಮೇಲೆ ದಯವನ್ನು ತೋರಿಸಿದರೂ ಕಮಲೆಯು ನಿನ್ನ ಮೇಲೆ ಪ್ರೇಮವನ್ನು ತೋರಿಸಲಿಲ್ಲ. ಆದ್ದರಿಂದ ನಾವು ಇಲ್ಲಿದ್ದು ಪ್ರಯೋಜನವೇನು? ನಮ್ಮ ನಗರಕ್ಕೆ ತಿರುಗಿ ಹೋಗುವ ಬಾ. ಬಂದ ಹಾದಿಗೆ ಸುಂಕವಿಲ್ಲ.

**ಕುಮತಿ:**—ಅದಿರಲಿ. ನನ್ನ ಜೀವದ ಗೆಳೆಯನಾದ ಚಂದ್ರಶೇಖರನು ಕಮಲೆಯನ್ನು ಭದ್ರವಾದ ದುರ್ಗದಲ್ಲಿ ಇಟ್ಟ ಕಾರಣವು ನಿನಗೆ ಗೊತ್ತಿದೆಯೆ?

**ವಿಚಿತ್ರಸೇನ:**—ಇಲ್ಲ. ಅದಾವ ಕಾರಣವು? ಮೊದಲು ಹೇಳು.

**ಕುಮತಿ:**—(ನಗುತ್ತ) ಮಿತ್ರಾ! ಕಮಲೆಯು ನನ್ನನ್ನು ಲಗ್ನವಾಗಲಿಲ್ಲವೆಂದು, ಈಗ ನಾನು ಅವಳ ಬಂಧ ಮುಕ್ತತೆಯನ್ನು ಮಾಡಲು ಹೊರಟರು

ವೆನು. ನಾನು ಕಮಲೆಯ ಬಿಡುಗಡೆಯನ್ನು ಮಾಡಿದೆನೆಂದರೆ ಆ ಚಾರು ಗಾತ್ರಿಯು ನನ್ನನ್ನೇ ವರಿಸುವುದು ನಿಶ್ಚಯವು. ಇದಲ್ಲದೆ ನನ್ನ ಸೌಂದರ್ಯ ವು ಸ್ತ್ರೀಯರ ಮೇಲೆ ಮೋಹಜಾಲವನ್ನು ಪಸರಿಸುವುದು.

**ವಿಚಿತ್ರಸೇನ:**— ಆ ರಾಜಪುತ್ರಿಯು ಸೌಂದರ್ಯವನ್ನು ನೋಡಿ ಮ ರುಳಾಗುವವಳಲ್ಲ.

**ಕುಮತಿ:**— ಅವಳು ಸೌಂದರ್ಯಕ್ಕೆ ಮರುಳಾಗದಿದ್ದರೂ ಸಂಪತ್ತಿಗೆ ಮರುಳಾಗುವುದಿಲ್ಲವೇ? ಎಲ್ಲರನ್ನು ತನ್ನ ಕಡೆಗೆ ಎಳೆದುಕೊಳ್ಳುವ ಲೋಹಚುಂಬ ಕವೇ ಸಂಪತ್ತಾಗಿರುವುದು. ಅದಿರಲಿ; ನಾನು ಅವಳನ್ನು ನೋಡಿದಂದಿನಿಂದ ನನ್ನ ಕಣ್ಣೆದುರಿಗೆ ಅವಳ ರೂಪವು ಕಟ್ಟಿದೆ. ಅವಳನ್ನು ಒಂದು ಸಲವಾದರೂ ನೋಡದೆ ಇರಲಾರೆನು. ಅವಳು ನನ್ನ ಮನೋದೇವತೆಯೇ ಆಗಿರುವಳು.

**ವಿಚಿತ್ರಸೇನ:**— ದೇವಿಯಾಗಿದ್ದರೆ, ಅವಳು ನಿನ್ನ ಇಚ್ಛೆಯನ್ನು ಪೂ ರ್ಣಮಾಡಬಹುದಾಗಿತ್ತು.

**ಕುಮತಿ:**— ಅದೇಕೆ?

**ವಿಚಿತ್ರಸೇನ:**— ದೇವಿಯು ತನ್ನ ಭಕ್ತರಿಗೆ ದರ್ಶನವನ್ನು ಕೊಟ್ಟು, ಉದ್ಧಾರಮಾಡದೆ ಇರುವಳೇ?

**ಕುಮತಿ:**— ಹೀಗೇನು? ಇನ್ನು ಮೇಲೆ ನಾನು ಆ ದೇವಿಯ ಸ್ತೋತ್ರ ವನ್ನು ಮಾಡುವೆನು. ಎನ್ನ ಪ್ರಾಣಪ್ರಿಯಳೇ! ಎನ್ನ ಮನೋದೇವ ತೆಯೇ! ನಿನ್ನ ಮುಖವನ್ನು ನನಗೆ ತೋರಿಸೇ, ದಯಮಾಡಿ ನನ್ನನು ಒಂಚಿಸ ಬೇಡ. ಬಾ.

**೨೭ ಪದ.** ಧಾಟಿ:— (सदा प्रणया विलासिनी)

ಇದೇನಬಲೇ ವಿನೋದವೇ ।
ಮುದವಾಗಿಹುದೀ ಸರಸಿಜ । ವದನದ ಸೊಬಗತೋರೆ ।। ಪ ।।
ಹದನ ಶರಕೆಮಿಗಿಲಾಗಿರುವುದೀಪೂಬಾಣ ।
ಮದನಶರನೋಡೆ । ಮುದದಿ ಪಾಲಿಸೇ ।

ಸದೆಯುತವನ ಶರವತವ ನೋಟದಲಿನೀ |
ಸೌದಾಮಿನಿ || ೧ ||

ನನ್ನ ಪ್ರಿಯಳು ದೇವಿಯಲ್ಲವೆಂದು ತಿಳಿದಿರುವಿಯಾ? ಮಿತ್ರಾ! ನನ್ನ ಮನೋದೇವತೆಯು ನನ್ನೆದುರಿಗೆ ಬಂದು ಹೇಗೆ ನಿಂತುಕೊಂಡಿರುವಳು ನೋಡು. ಇನ್ನು ಮೇಲೆ ನನ್ನ ಮನೋರಥವು ಸಿದ್ಧಿಗೆ ಹೋಯಿತೆಂದು ತಿಳಿ. (ಎಂದು ನಗುತ್ತ ಬಂದು, ವಿಚಿತ್ರಸೇನನನ್ನು ಅಪ್ಪಿಕೊಂಡು ನಗುತ್ತ) ವಿಚಿತ್ರಸೇನಾ! ಸಿಕ್ಕಳು. ಪ್ರಿಯಳು ಸಿಕ್ಕಳು. ಇನ್ನು ಇವಳನ್ನು ಕರೆದುಕೊಂಡು ನಗರಕ್ಕೆ ಹೋಗುವ ನಡೆ.

**ವಿಚಿತ್ರಸೇನ:**—ಕುಮತಿಯೇ! (ಎಂದು ನಗುತ್ತ) ಏನು ಜಾಣನೊ ನೀನು? ನಾನು ಕಮಲೆಯಲ್ಲ; ನಿನ್ನ ಮಿತ್ರನು. ನೀನು ಇಂತಹ ಹುಚ್ಚನಿರುವುದರಿಂದಲೇ ಅವಳು ನಿನ್ನನ್ನು ಲಗ್ನವಾಗುವುದಕ್ಕೆ ಇಚ್ಛಿಸಲಿಲ್ಲ.

**ಕುಮತಿ:**—(ಲಜ್ಜೆಯಿಂದ ಹಿಂದಕ್ಕೆ ಸರಿದು ನಿಂತು) ಮಿತ್ರಾ! ದೇವಭಕ್ತರಿಗೆ ಎಲ್ಲಿ ನೋಡಿದರೂ ದೇವರ ರೂಪವು ಕಾಣುವಂತೆ ನನಗೆ ಸ್ತ್ರೀರೂಪವು ಎಲ್ಲ ಕಡೆಯಲ್ಲಿಯೂ ಕಾಣುವುದು. ಅಂತೆಯೇ ಈ ಪ್ರಮಾದವು ನನ್ನಿಂದಾಯಿತು. ಈ ಸಾರೆ ನೀನು ನನ್ನನ್ನು ಕ್ಷಮಿಸು. ಒಳ್ಳೇದು ಆ ಸುಂದರಿಯು ನನಗೆ ವಶವಾಗುವುದಾದರೂ ಹೇಗೆ?

**ವಿಚಿತ್ರಸೇನ:**—ಅವಳು ನಿನಗೆ ವಶವಾಗುವವಳಲ್ಲ. ನನ್ನಂತಹ ಶೂರನಿಗೆ ವಶವಾಗುವಳು. (ಎಂದು ನಗುವನು.)

**ಕುಮತಿ:**—ಮೂರ್ಖನಂತೆ ಆತ್ಮಸ್ತೋತ್ರವನ್ನು ಮಾಡಿಕೊಳ್ಳಬೇಡ. ನಿನ್ನ ಕಂಠತ್ರಾಣವು ಮಾತ್ರ ಹೆಚ್ಚಿನದು. ನಿನಗೆ ಬಾಹುಶಕ್ತಿಯೇ ಇಲ್ಲ. ಪಕ್ವಾನ್ನಕ್ಕೆ ಮೆಚ್ಚಿದವರು ಎಂದಾದರೂ ಯುದ್ಧವನ್ನು ಮಾಡಬಲ್ಲರೊ?

**ವಿಚಿತ್ರಸೇನ:**—ಮಿತ್ರಾ! ನಾನು ಸಾಮಾನ್ಯನಲ್ಲ. ನನ್ನಂತ ಶೂರನು ಯಾರೂ ಇಲ್ಲ. ಹಿಂದಕ್ಕೆ ನಾನು ಮಣಿಪುರದ ರಾಜನೊಡನೆ ಯುದ್ಧಕ್ಕೆ ಹೋಗಿ, ಅವನ ಪರಾಕ್ರಮದ ಬಲವನ್ನು ತಗ್ಗಿಸಿದೆನು. ಹಾಗೂ ನಾನು ಶೃಂಗರಿಸಿದ ಆನೆಯ ಮೇಲೆ ಕುಳಿತು ಬಹು ಸಂಭ್ರಮದಿಂದ ನನ್ನ ನಗರಕ್ಕೆ

ಬಂದೆ, (ಎಂದು ನಗುತ್ತ) ಆಗ್ಗೆ ಏನು ಹೇಳಲಿ! ನಗರದಲ್ಲಿಯ ಸುಂದರಿಯರೆಲ್ಲರು ನನ್ನನ್ನೇ ಬಹು ಆದರದಿಂದ ನೋಡ ಹತ್ತಿದರು. ಆಗ್ಗೆ ನನಗಾದ ಆನಂದವನ್ನು ಎಷ್ಟೆಂದು ವರ್ಣಿಸಲಿ! ಮಿತ್ರಾ! ಗಜಾರೂಢರಾದ ವೀರರು ಕಿಲ್ಲೆಯ ಬಾಗಿಲು ತಾಗುವ ಪ್ರಸಂಗವು ಬಂದರೆ ತಲೆ ತಗ್ಗಿಸುವರು.

**ಕುಮತಿ:**— ಒಳ್ಳೇದು. ಮುಂದೇನಾಯಿತು.

**ವಿಚಿತ್ರಸೇನ:**— ವೀರಾಧಿವೀರನಾದ ನಾನು ನನ್ನ ಒಡೆಯನಿಗೆ "ರಾಜರೇ! ನಾನು ನಗರವನ್ನು ಪ್ರವೇಶಿಸ ಬೇಕೆಂಬ ಇಚ್ಛೆಯೇ ತಮ್ಮದಿದ್ದರೆ ತಾವು ನನ್ನ ತಲೆಯನ್ನಾಗಲಿ ಆನೆಯ ಕಾಲುಗಳನ್ನಾಗಲಿ ಕಡಿಸಿ, ನನ್ನನ್ನು ಒಳಗೆ ಕರೆದುಕೊಂಡು ಹೋಗಿರಿ. ನಾನು ಬಹು ಶೂರನು ತಲೆಯನ್ನು ಬಗ್ಗಿಸುವವನಲ್ಲ. ಎಂದು ಸ್ಪಷ್ಟವಾಗಿ ಹೇಳಿದೆನು." ಆ ರಾಜನಾದರೂ ನನ್ನಂತ ವೀರನ ಆಜ್ಞೆಯನ್ನು ಮೀರಲಾರದೆ ಕಿಲ್ಲೆಯ ಬಾಗಿಲ ಹಾರಿ ಹೊಡಿಸಿ ನನ್ನನ್ನು ಒಳಗೆ ಕರೆದುಕೊಂಡು ಹೋದನು. (ನಗುತ್ತ) ವೀರನಿಗೆ ಎಲ್ಲರೂ ಮಾನವನ್ನು ಕೊಟ್ಟೇ ಕೊಡುವರು. ನಾನು ನಿನ್ನಂತೆ ಸ್ತ್ರೀಯರಿಗೆ ಹೆದರಿ ಓಡಿ ಬರುವವನಲ್ಲ ತಿಳಿದಿರಲಿ.

**ಕುಮತಿ:**— ನೀನು ಹೇಳಿದಂತೆ ನಾನೇನು ಶೂರನಲ್ಲ. ಮಿತ್ರಾ! ನಾನು ಕಮಲೆಗೆ ಹೆದರಿ ನಗರಕ್ಕೆ ಓಡಿ ಬಂದಂದಿನಿಂದ ಗುಬ್ಬಿಗಳ ಮೇಲೆ ಬ್ರಹ್ಮಾಸ್ತ್ರಗಳನ್ನು ಬಿಡುತ್ತ ಬಿಡುತ್ತ ಯುದ್ಧಕಲೆಯನ್ನು ಕಲಿತು ಜಾಣನಾಗಿರುವೆನು. ನಾನು ಆ ರಾಜಪುತ್ರಿಗೆ ಹೆದರಿ ಓಡಿ ಬಂದಂತೆ ಆ ಗುಬ್ಬಿಗಳು ನನ್ನ ಶಸ್ತ್ರವನ್ನು ನೋಡಿ ಓಡಿಹೋದವು ನೋಡು. ಇನ್ನು ಮೇಲೆ ಆ ರಾಜಪುತ್ರಿಯು ನನ್ನೆದುರಿಗೆ ನಿಲ್ಲಲಾರಳು. ಆದರೂ ರಕ್ತಪಾತವನ್ನು ಮಾಡದೆ ಅವಳನ್ನು ವಲಿಸಿಕೊಳ್ಳುವುದು ನನಗೆ ಯೋಗ್ಯವಾಗಿ ತೋರುತ್ತದೆ. ಏಕೆಂದರೆ ಒಂದು ವೇಳೆ ನಾನು ಅವಳ ಉಗ್ರರೂಪವನ್ನು ನೋಡಿ ಹೆದರಿ ಓಡಿಹೋಗ ಬಹುದು. (ಎಂದು ನಗುತ್ತ) ವಿಚಿತ್ರಸೇನಾ! ಅವಳನ್ನು ವಲಿಸುವ ಯುಕ್ತಿಯು ನಿನಗಾದರೂ ಗೊತ್ತಿದ್ದರೆ ಹೇಳು.

**ವಿಚಿತ್ರಸೇನ:**— ನನ್ನಲ್ಲಿ ಏನು ಕಡಿಮೆ ಯುಕ್ತಿಗೆ? ಮಿತ್ರಾ! ಸುಂದರಿಯರು ಪುರುಷರೊಡನೆ ಮಾತನಾಡಲು ನಾಚುವುದು ಅವರ ಸ್ವಭಾವವೇ ಆಗಿ

ರುವುದು. ಆದ್ದರಿಂದ ನಾವೂ ಸೀರೆಗಳನ್ನುಟ್ಟುಕೊಂಡು, ಅವರಂತೆ ಬಳೆಗಳನ್ನೂ ಆಭರಣಗಳನ್ನೂ ಇಟ್ಟುಕೊಂಡು ಬಹು ಒಯ್ಯಾರವನ್ನು ಮಾಡುತ್ತ ಅವರ ಹತ್ತಿರ ಹೋಗಬೇಕು ಎಂದರೆ ಅವರು ನಿರ್ಭಯದಿಂದ ನಮ್ಮೊಡನೆ ಮಾತಾಡುವರು.

**ಕುಮತಿ:**— ಸಖನೇ! ನಾನು ಅವಳಿಗೆ ಹೆದರಿ ಓಡಿ ಬಂದದ್ದಕ್ಕಾಗಿ ಎಲ್ಲರು ನನ್ನನ್ನು ನೋಡಿ ನಗಹತ್ತಿರುವರು. ನಾನು ಸ್ತ್ರೀವೇಷವನ್ನು ಧರಿಸಿ ಅಲ್ಲಿಗೆ ಹೋದದ್ದು ತಿಳಿದರಂತೂ ತೀರೇಹೋಯಿತು. ಅವರು ನನ್ನ ಸಿಂಹಾಸನವನ್ನೇ ಕಸಿದುಕೊಳ್ಳುವರು. ವಿಚಿತ್ರಸೇನಾ! (ಎಂದು ನಗುತ್ತ) ನನ್ನ ಸಿಂಹಾಸನವು ಅನ್ಯರ ಸ್ವಾಧೀನವಾದರೂ ಚಿಂತೆಯಿಲ್ಲ. ಆ ಸುಂದರಿಯು ನನ್ನ ವಶವಾದರಾಯಿತು. ಲೋಕದ ಜನರು ಸ್ತ್ರೀಯರಿಗಾಗಿಯೇ ನಾನಾ ತೆರದ ಉದ್ಯೋಗಗಳನ್ನು ಮಾಡುವರು. ನಾನು ಸುಮ್ಮನೆ ಕುಳಿತುಕೊಳ್ಳುವವನಲ್ಲ. ಯಾಕಂದರೆ ನಾನು ಮೈಯೆಲ್ಲ ಬೂದಿ ಬಡೆದುಕೊಂಡು ಹರಿಯ ಸ್ಮರಣೆಯನ್ನು ಮಾಡುವ ಸನ್ಯಾಸಿಯಲ್ಲ.

**ವಿಚಿತ್ರಸೇನ:**— (ತನ್ನೊಳಗೆ) ಇವನಂತ ಮೂರ್ಖನನ್ನು ನಾನು ಎಲ್ಲೆಲ್ಲಿಯೂ ಕಾಣೆ. ಈ ಅಧಮನು ರಾಜಧರ್ಮವೆಂದರೆ ಅನ್ಯರ ಸ್ತ್ರೀಯರನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಅರಮನೆಗೆ ಓಡಿಬರುವುದೂ ಸ್ತ್ರೀಯರನ್ನು ಒಲಿಸುವುದೂ ತನ್ನ ಧರ್ಮವೆಂದು ತಿಳಿದುಕೊಂಡಿರುತ್ತಾನೆ. ಹೆಂಗಸರೆಂದರೆ ಬಾಯಿತೆಗೆಯುವ ಮೂರ್ಖರಾಜರು ಕುಣಿಸಿದಂತೆ ಕುಣಿಯುವರು. ಭಗವಂತಾ! ಇಂಥ ಮೂರ್ಖರಾಜರ ಜನ್ಮವು ಈ ಪವಿತ್ರವಾದ ಭರತಖಂಡದಲ್ಲಿ ಮಾತ್ರ ಆಗ ಬಾರದು. ಇಷ್ಟೇ ನಿನಗೆ ನನ್ನ ಪ್ರಾರ್ಥನೆಯು. (ಎಂದು ಕುಮತಿಯನ್ನು ಕುರಿತು) ಕುಮತಿಯೇ! ನಾನು ಹೇಳಿದಂತೆ ನೀನು ಕೇಳಲು ಸಿದ್ಧನಾದರೆ ಕಮಲೆಯು ನಿನಗೆ ವಶವಾಗುವಳು.

**ಕುಮತಿ:**— ಓಹೋ! ನಾನು ನಿನ್ನ ಆಜ್ಞೆಯಂತೆಯೇ ವರ್ತಿಸುವೆನು.

**ವಿಚಿತ್ರಸೇನ:**— ಇದು ಕಲಿಯುಗವು. ತೀರ್ಥಪಾನಮಾಡದೆ ಸುರಾಪಾನ ಮಾಡುವುದೂ, ದೇವರ ಮುಖವನ್ನು ನೋಡದೆ ಸುಂದರಿಯರ ಮುಖವನ್ನು ನೋಡುವುದೂ ಯಜ್ಞಯಾಗಾದಿಗಳ ಹೊಗೆಯಿಂದ ಆಕಾಶವನ್ನು

ತುಂಬದೆ ಧೂಮಪಾನ ಮಾಡಿ ಮುಖದಿಂದ ಬಿಡುವ ಹೊಗೆಯಿಂದ ತುಂಬು ವುದೂ ಈಗಿನ ಕಾಲದ ಧರ್ಮವಾಗಿದೆ. ನೀನಾದರೂ ಸುರೆಯನ್ನು ಕುಡಿದು ನಾರಿಯನ್ನೂ ಸಿರಿಯನ್ನೂ ಹೊಂದಿ ಆನಂದಬಡು.

**ಕುಮತಿ:**— ನಾನು ಕದ್ದು ಸುರೆಯನ್ನು ಕುಡಿಯುವೆನೆಂದೇ ಲಕ್ಷ್ಮಿಯು ನನ್ನ ವಶವಾಗಿರುವಳು. ಸಿರಿಯು ಸುರಾಭಕ್ತರಿಗೆ ಒಲಿಯುವಳಲ್ಲದೆ ಶಾರದಾ ಭಕ್ತರಿಗೆ ಎಂದಿಗೂ ಒಲಿಯುವಳಲ್ಲ; ಮೇಲಾಗಿ ಸುರೆಯ ವರ್ಣವು ಕ್ಷೀರಸಾ ಗರದಂತೆ ಬೆಳ್ಳಗಿರುವುದರಿಂದ ಲಕ್ಷ್ಮಿಯು ತನ್ನ ತಂದೆಯ ವೈಬಣ್ಣದ ಅಭಿಮಾ ನವನ್ನು ಹಿಡಿದು, ಸುರಾಭಕ್ತರನ್ನೇ ಸೇರುವಳು. ಸ್ತ್ರೀಯರಿಗೆ ತವರ ಮನೆ ಯ ಅಭಿಮಾನವಿರುವುದೆಂಬುದು ನಿನಗೆ ಗೊತ್ತಿದೆ. ಸರಾಯಿಯನ್ನು ಕುಡಿ ಯುವವರೇ ರಾಜಯೋಗಿಗಳು. ಮಿತ್ರಾ!

**೨೮ ಪದ.** ರಾಗ:—ಸಿಂಧ ಭೈರವಿ ತ್ರಿತಾಲ.

ಧಾಟಿ:—(**घनवरविरहित सुख**)

ಅನುದಿನ ಮೆರೆಯುವ ವರಸುರೆಯು ತಾನು |
ಮನತಾಪ ನೀಗಿ ಮೋದ ಬೀರಿ | ಮಿನುಗುತಿಹುದು
ರೂಪತೋರಿ | ಗುಣಿಯೆ ಕೇಳು || ಪ ||
ಕುಡಿದುನೋಡು ಕುಣಿದಾಡುತ ರೂಪವ |
ಸಡಗರದಲಿ ಶರಣರಿಗೆ ತೋರು || ೧ ||

ಯೋಗಿಗಳಿಗೆ ಸುಖದುಃಖಗಳ ಪರವಿಯೇ ಇರುವುದಿಲ್ಲ. ಸುರಾಭಕ್ತ ರಿಗೆ ಸಮಾಧಿಯಲ್ಲಿದ್ದಾಗ ನೆಲವು ಯಾವುದು ತಿಪ್ಪೆ ಯಾವುದು ಎಂಬ ಎಚ್ಚರವೇ ಇರುವುದಿಲ್ಲ. (ಎಂದು ನಗುವನು.) ಮಿತ್ರನೇ! ಕಮಲೆಯ ಮುಖಕಮಲ ವನ್ನು ನೋಡಲು ಅತ್ತಕಡೆಗೆ ಹೋಗುವ ನಡೆ. (ಎಂದು ಇಬ್ಬರು ಹೋಗು ವರು.)



# ೩ನೆಯ ಪ್ರವೇಶವು.



## ಸ್ಥಳ:— ಅರಮನೆಯ ಒಂದು ಭಾಗವು.

### ಪಾತ್ರಗಳು:— ಕಮಲೆ ಮತ್ತು ಚಂದ್ರಶೇಖರನು.

ಬರುವರೀತಿಯು:—(ಚಂದ್ರಶೇಖರನು ಆಸನದ ಮೇಲೆ ಕುಳಿತಿರುವನು. ಕಮಲೆಯು ಎದುರಿಗೆ ಬಹು ವಿನಯದಿಂದ ನಿಂತಿರುವಳು.)

**ಚಂದ್ರಶೇಖರ:**—(ತನ್ನೊಳಗೆ) ಇಂದು ಇವಳನ್ನು ಒಲಿಸುವುದಾದರೂ ಹೇಗೆ? (ತುಸ ವಿಚಾರಿಸಿ) ನಾನು ಈ ಅಧಮಳ ಇಚ್ಛೆಯಂತೆ ವರ್ತಿಸಬೇಕು. ಇಲ್ಲದಿದ್ದರೆ ಇವಳು ಆತ್ಮಹತ್ಯವನ್ನು ಮಾಡಿಕೊಳ್ಳುವಳು. (ಪ್ರಕಟವಾಗಿ) ಎನ್ನ ಮೋಹದರಗಿಳಿಯೇ! ಚಿಂತೆಯನ್ನು ಮಾಡಿ ಮಾಡಿ ನಿನ್ನ ಅಂಗಕಾಂತಿಯು ಕುಂದಿಹೋಯಿತಲ್ಲಾ. ಈ ನಿನ್ನ ಸ್ಥಿತಿಯನ್ನು ನೋಡಿ ನಾನು ಆನಂದ ಬಡುವ ಬಗೆಹೇಗೆ? ಕಮಲೇ! ಹೀಗೆ ನಿಲ್ಲಬೇಡ. ಬಾ. ನನ್ನ ಹತ್ತಿರ ಕುಳಿತುಕೊಂಡು, ನನ್ನೊಡನೆ ಮಾತನಾಡು. ಇನ್ನು ಮೇಲೆ ನಾನು ನಿನ್ನ ಇಚ್ಛೆಯಂತೆ ವರ್ತಿಸುವೆನು.

**ಕಮಲೆ:**—ತಾತನೇ! ನನ್ನಿಂದ ನಿನಗೇನು ಲಾಭವಾಗುವಂತಿದೆ. ನಾನು ನಿನ್ನ ಆಜ್ಞೆಯನ್ನು ಮೀರಿ ನಡೆದ ಪಾಪಿಯಲ್ಲವೆ?

**ಚಂದ್ರಶೇಖರ:**—ಇಲ್ಲಿಯ ವರೆಗೆ ಸಾಕಿ ಸಲಹಿ ಬೆಳಸಿದ ಮಕ್ಕಳು ದುಃಖಬಡುವುದನ್ನು ನೋಡಿ ತಾಯಿತಂದೆಗಳು ಎಂದಾದರೂ ಹಿಗ್ಗುವುದುಂಟೇ? ಕಮಲೇ! ಬಾ. ಕುಳಿತುಕೊ; ಮಾತನಾಡು.

**ಕಮಲೆ:**—(ತನ್ನೊಳಗೆ) ಇಂದು ನನ್ನನ್ನು ಹಳಿಯುವ ತಂದೆಯು ಹೀಗೇಕೆ ಮಾತಾಡುತ್ತಿರಬಹುದು! ಹಾ! ತಿಳಿಯಿತು. ನನ್ನ ಮನಸ್ಸಿನ ಒಲುಮೆಯನ್ನು ಕುಮತಿಯ ಕಡೆಗೆ ಒಯ್ಯುವುದಕ್ಕೇ ಇರಬಹುದು. (ಪ್ರಕಟವಾಗಿ) ಜನಕನೇ! ನೀನು ನನ್ನ ಸಲುವಾಗಿ ಚಿಂತಿಸಬೇಡ. ದುರ್ದೈವಿಯಾದ ನನಗೆ ಕಾರಾಗೃಹವಾಸವೇ ಯೋಗ್ಯವು. ನಿನ್ನ ದಯೆಗೆ ಪಾತ್ರಳಲ್ಲದ ನಾನು ಎಲ್ಲಿ

ಇದ್ದರೇನು? ಅಥವಾ ಕಾರಾಗೃಹದಲ್ಲಿಯೇ ನಿರಂತರವಾಗಿದ್ದರೇನು? ನನ್ನ ಮೇಲೆ ನಿನ್ನ ಪ್ರೇಮವಿದ್ದದ್ದೇ ನಿಜವಾಗಿದ್ದರೆ ನೀನು ನನ್ನನ್ನು ಭದ್ರವಾದ ದುರ್ಗದಲ್ಲಿ ಇಡುತ್ತಿದ್ದಿಯಾ? ನೀನು ಅಲ್ಲಿ ಇಟ್ಟದ್ದೇ ಒಳ್ಳೆಯದಾಯಿತು.

**ಚಂದ್ರಶೇಖರ:**— ಕಮಲೇ! ಹಿಂದೆ ಆದದ್ದನ್ನೆಲ್ಲ ಮರೆತು ಬಿಡು. ಇನ್ನು ಮೇಲೆ ನಾನು ನಿನ್ನ ಮನಸ್ಸನ್ನು ನೋಯಿಸುವುದಿಲ್ಲ. ಎನ್ನ ಮೋಹದರಗಿಳಿಯೇ! ಸಿಟ್ಟಿನ ಭರದಲ್ಲಿ ಮಾಡಿದ ಅಪರಾಧವನ್ನು ಎಣಿಸಬೇಡ.

**ಕಮಲೆ:**— ಹೀಗೇಕೆ ಮಾತಾಡುವೆ? ನಿನ್ನ ಆಜ್ಞೆಯಂತೆ ವರ್ತಿಸುವುದು ನನ್ನ ಕರ್ತವ್ಯವು.

**ಚಂದ್ರಶೇಖರ:**— ಹಾಗೇ ಆಗಲಿ. ಕಮಲೇ! ಈ ನನ್ನ ಪ್ರಯತ್ನವೆಲ್ಲ ನಿನ್ನ ಸುಖಕ್ಕಾಗಿಯೇ ಅಲ್ಲವೇ? ನಿನಗೆ ಆನಂದವಾದರೆ ನನಗೆ ಆನಂದವು. ನಿನಗೆ ದುಃಖವಾದರೆ ನನಗೆ ದುಃಖವು. ಸುಕುಮಾರಿಯೇ! ನಮ್ಮಿಬ್ಬರ ದೇಹವು ಬೇರೆ ಬೇರೆಯಾಗಿದ್ದರೂ ಜೀವವು ಒಂದೇ ಆಗಿರುವುದು. ಕಮಲೇ! ನನ್ನ ಮಾತುಗಳನ್ನು ಕೇಳು. ಬರಬರುತ್ತಾ ನಿನ್ನ ಅಪರಾಧವು ನಿನಗೆ ತಿಳಿದು ಆ ಮೇಲೆ ಪಶ್ಚಾತ್ತಾಪವಾದೀತು. ನನ್ನ ಆಜ್ಞೆಯನ್ನು ಮಿಾರಿ ನಡೆಯ ಬೇಡ.

**ಕಮಲೆ:**— ನಿನ್ನ ಆಜ್ಞೆಯನ್ನು ನಾನು ಎಂದಾದರೂ ಮಿಾರಿರುವೆನೆ?

**ಚಂದ್ರಶೇಖರ:**— ಹಾಗಾದರೆ, ನನ್ನ ಪ್ರಿಯ ಮಿತ್ರನಾದ ಕುಮತಿರಾಜನನ್ನು ಲಗ್ನವಾಗ ಬೇಕೆಂಬುದೇ ನನ್ನ ಆಜ್ಞೆಯು.

**ಕಮಲೆ:**— ಈ ಒಂದು ಆಜ್ಞೆಯನ್ನು ಮಾತ್ರ ಪಾಲಿಸಲಾರೆನು. ಹಂಸರಾಜರೇ ನನ್ನ ಮನೋವಲ್ಲಭರು.

**ಚಂದ್ರಶೇಖರ:**— ಹಟವನ್ನು ತೊಡಬೇಡ. ಸುಂದರನೂ ಧನಿಕನೂ ಆದ ಕುಮತಿಯನ್ನೇ ಲಗ್ನವಾಗು ಎಂದರೆ ನಿನಗೆ ಆನಂದವಾಗುವುದು. ದೀಪಾವಳಿ ಉತ್ಸವ ಸುಮಾರಕ್ಕೆ ನಾನು ಶ್ರೀ ಲಕ್ಷ್ಮೀಪೂಜನ ನಿಮಿತ್ತ ಕುವಲಯಪುರಕ್ಕೆ ಹೋಗಿದ್ದೆನು. ಆಗ ಅವನ ಕೋಶದಲ್ಲಿಯ ಸಂಪತ್ತನ್ನು ನೋಡಲು ಈ ಎರಡು ಕಣ್ಣುಗಳೂ ಸಾಲವು. ತಾನಾಗಿಯೇ ಮನೆಗೆ ಬರುವ ಲಕ್ಷ್ಮಿಯನ್ನು

ಹೊರಗೆ ದೂಡಬೇಡ. ಜನರು, "ಶಿವನೇ ಹೆಚ್ಚಿನ ದೇವರು. ಕೇಶವನೇ ಹೆಚ್ಚಿನ ದೇವರು" ಎಂದು ವಾದಿಸುತ್ತಿದ್ದರೂ ಶ್ರೀ ಲಕ್ಷ್ಮಿಗೆ ಮಾತ್ರ ಎಲ್ಲರೂ ಸರಿಯಾಗಿ ಮಾನವನ್ನು ಕೊಡುವರು.

**ಕಮಲೆ:**—ಜನಕನೇ! ನಾನೂ ಬಲ್ಲೆ. ಶ್ರೀ ಲಕ್ಷ್ಮೀದೇವಿಯು ಎಲ್ಲರಿಗೂ ಪೂಜ್ಯಳು. ಆದರೆ ಅವಳ ವಾಸವು ಗುಣಿಗಳಲ್ಲಿ ಸ್ಥಿರವಾಗಿರುವುದು. ದುರ್ಗುಣಿಗಳಲ್ಲಿದ್ದರೂ ಸ್ವಲ್ಪ ದಿವಸದಲ್ಲಿಯೆ ನೀರಿನ ಗುಳ್ಳೆಯಂತೆ ಹಾರಿಹೋಗುವಳು. ಗುಣಿಗಳು ದರಿದ್ರರಿದ್ದರೂ ಜಗತ್ತಿನಲ್ಲಿ ಪೂಜ್ಯತೆಗೆ ಪಾತ್ರರು; ಆಶ್ರಿತಗೆ ಸುಖದಾತರು. ಹಂಸರಾಜನಂಥ ಗುಣಿಯೂ ಚತುರನೂ ಯಾರೂ ಇಲ್ಲವೆಂದು ಕೇಳಿರುವೆನು. ಭ್ರಮರಿಯು ಮಕರಂದವಿರುವ ಪುಷ್ಪವನ್ನು ಬಿಟ್ಟು; ಬೇರೆ ಪುಷ್ಪವನ್ನು ಹಾರೈಸುವುದೆ ಹೇಳು. ಇದಲ್ಲದೆ

ರಾಗ:—ಕಾಫಿ.

**೨೯ ಪದ.** ಧಾಟಿ:—(**भास मला झाला**)

ಗುಣವೆ ಮಹಾತೇಜಾಲಾಲಿಸೋ ನೃಪಾಲಾ |
ಮನ್ನಿಸೈಗುಣಿಯನೇ ಗುಣವೆ ಕಂಠಮಾಲಾ |
ಮಾನವನಿಗೆ ಆಧಾರ ಶೀತಾಂಶುಜಾತಾಸುಶೀಲಾ || ಪ ||
ಗುಣಿಯಗಿಂತ ಶರಣರಾರು |
ಗುಣಿಯೇ ಈ ಲೋಕತಾಪ |
ಮನದತಾಪ ದೇಹತಾಪ ಕಳೆವಾನಳಿಯುವಾ ಸುತೇಜಾ || ೧ ||

ಮಗಳಿಗೆ ಗುಣಿಗಳ ಸಂಬಂಧವನ್ನು ಬಯಸದ ತಂದೆಯು ಈ ಜಗತ್ತಿನಲ್ಲಿ ಉಂಟೆ?

**ಚಂದ್ರಶೇಖರ:**—ನಾನು ಇರುವೆನಲ್ಲ. ಕಮಲೇ! ಗುಣಿಗಳ ಸಂಬಂಧವೇ ನನಗೆ ಬೇಡ. ಕುಮತಿಯೂ ನಿರ್ಗುಣಿಯೂ ಆದ ದುರ್ಯೋಧನನು ಸಾಯುವ ವರೆಗೆ ರಾಜ್ಯಸುಖವನ್ನು ಭೋಗಿಸಿದನು. ಸುಮತಿಯೂ ಸುಗುಣಿಯೂ ಆದ ಧರ್ಮರಾಜನು ದುಃಖವನ್ನನುಭವಿಸಬೇಕಾಯಿತು.

**ಕಮಲೆ:**—ಗುಣಿಗಳು ದುರ್ದೈವದಿಂದ ಸ್ವಲ್ಪಕಾಲ ಕಷ್ಟಪಟ್ಟರೂ

ಅವರೇ ಹೆಚ್ಚಿನವರು. ದೇವರು ಗುಣಕ್ಕೆ ಮೆಚ್ಚುವನಲ್ಲದೆ, ಸಂಪತ್ತಿಗೆ ಎಂದೂ ಮರುಳಾಗುವನಲ್ಲ. ಶ್ರೀ ಕೃಷ್ಣಪರಮಾತ್ಮನು ದುರ್ಯೋಧನರಾಜನ ಮನೆಯಲ್ಲಿಯ ಪಂಚಪಕ್ವಾನ್ನವನ್ನು ಸೇವಿಸದೆ, ವಿದುರನ ಮನೆಯಲ್ಲಿಯ ಹಾಲನ್ನು ಕುಡಿದು, ಸಂತೋಷ ಬಟ್ಟನು. ಪೂಜ್ಯರೇ! ಯಾವಾಗಲೂ ದೇವರು ಮೆಚ್ಚುವ ಕಾರ್ಯಗಳನ್ನು ಮಾಡುತ್ತಿರಬೇಕು.

**ಚಂದ್ರಶೇಖರ:**—(ತನ್ನೊಳಗೆ) ಈ ಅಧಮಳು ನನ್ನ ಆಜ್ಞೆಯನ್ನು ಮೀರಿ ನಡೆಯುವುದೇ ನಿಜ. ಏನು ಮಾಡಲಿ, ಈಗ ಸಿಟ್ಟು ಮಾಡಿದರೆ ಆತ್ಮಹತ್ಯವನ್ನು ಮಾಡಿಕೊಂಡಾಳು. ಇವಳನ್ನು ಹಾದಿಗೆ ತರಲೇಬೇಕು. ಮೊನ್ನೆ ಮೊನ್ನೆ ಹುಟ್ಟಿದ ಇವಳಿಗೆ ತನ್ನ ಕಲ್ಯಾಣವೆಲ್ಲಿ ತಿಳಿಯುವುದು? (ಎಂದು ಪ್ರಕಟವಾಗಿ) ಕಮಲೇ! ನಿನ್ನಂತೆಯೇ ಆಗಲಿ. ನೀನು ನಿನ್ನ ಸಖಿಯರನ್ನು ಕೂಡಿಕೋ ನನಗೆ ಸ್ವಲ್ಪ ಕಾರ್ಯವಿದೆ. ಹೋಗಿ ಬರುವೆನು. ಇನ್ನು ಸ್ವಲ್ಪ ವೇಳೆಯಲ್ಲಿ ನಾನು ನಿನ್ನ ಇಚ್ಛೆಯನ್ನು ಪೂರ್ಣ ಮಾಡುವೆನು. (ಕಮಲೆಯು ಹೊರಟು ಹೋಗುವಳು. ಕಮಲೆಯು ಹೋದ ಮೇಲೆ) ನಾನಾದರೂ ಸುಮ್ಮನೆ ಏಕೆ ಕೂಡಲಿ? ಈ ನೀಚಳನ್ನು ಇದಕ್ಕೂ ಭದ್ರವಾದ ಕೋಟೆಯಲ್ಲಿಡುವುದಕ್ಕೆ ನನ್ನ ಪ್ರಿಯ ಮಿತ್ರನಾದ ಬಲಸಿಂಹನಿಗೆ ಹೇಳುವೆನು. (ಎಂದು ಹೋಗುವನು.)



## ೪ನೆಯ ಪ್ರವೇಶವು.

ಸ್ಥಳ:—ಕೋಟೆಯ ಹಿಂಭಾಗದಲ್ಲಿರುವ ಅಂಗಳ.

ಪಾತ್ರಗಳು:—**ಕಮಲೆ, ಚಿತ್ರರೇಖೆ, ಕೋಕಿಲೆ, ಮತ್ತು ಬಲಸಿಂಹ ಸೇನಾಧೀಶನು.**

ಬರುವ ರೀತಿಯು:—(ಬಹು ಅಂದವಾದ ಹೂವಿನ ಗಿಡಗಳ ಮಧ್ಯದಲ್ಲಿರುವ ಶಿಲಾಸನದ ಮೇಲೆ ಕಮಲೆಯು ಕುಳಿತಿರಬೇಕು. ಹತ್ತಿರ ಗೆಳತಿಯರು ಇರತಕ್ಕದ್ದು.)

**ಚಿತ್ರರೇಖೆ:**—ರಾಜಗೃಹದಲ್ಲಿ ವರ್ತಿಸಿದ ಸಂಗತಿಯನ್ನೆಲ್ಲಾ ನಮ್ಮ ಮುಂದೆ ಹೇಳು, ಎಂದರೆ ನಮ್ಮ ಮನಸ್ಸಿಗೆ ಸಮಾಧಾನವಾಗುವುದು.

**ಕಮಲೆ:**—ಅಲ್ಲಿಯ ಸಂಗತಿಯನ್ನೇನು ಹೇಳುವುದು! ನನ್ನ ತಂದೆಯ ಪ್ರೇಮವೆಲ್ಲ ಆ ದುಷ್ಟ ಕುಮತಿಯ ಮೇಲೆಯೇ ಇದೆ.

**ಕೋಕಿಲೆ:**—ಅದಿರಲಿ. ನಿನ್ನನ್ನು ಈ ಸ್ಥಿತಿಗೆ ತಂದ ಕಾಮನ ಆ ಬಾಣಗಳನ್ನು ಮಂಜುಘೋಷೆಯು ನನ್ನ ಕಡೆಗೆ ಕೊಟ್ಟು ಹೋಗಿದ್ದಾಳೆ.

**ಕಮಲೆ:**—ಅವೆಲ್ಲಿವೆ? ಕೊಡು. ನೋಡೋಣ.

**ಕೋಕಿಲೆ:**—(ಕೈಯಲ್ಲಿ ಹೂವಿನ ಮಾಲೆಯನ್ನು ಹಿಡಿದುಕೊಂಡು) ಈ ಹೂವುಗಳು ಮದನನ ಬಾಣಗಳಾಗಿವೆ. ಇವೇ ನಿನ್ನ ವಶವಾದ ಮೇಲೆ ಆ ದುಷ್ಟ ಮದನನ ಆಟವು ನಿನ್ನ ಮುಂದೆ ನಡೆಯಲಾರದು. ನೀನು ಇವೇ ಬಾಣಗಳನ್ನು ಆ ದುಷ್ಟನ ಮೇಲೆ ಬಿಡು ಎಂದರೆ ಅವನು ತಾನಾಗಿಯೇ ನಿನಗೆ ಹೆದರಿ ಓಡಿಹೋಗುವನು. (ಎಂದು ಮಾಲೆಯನ್ನು ಕಮಲೆಯ ಮೇಲೆ ಚೆಲ್ಲುವಳು.)

**ಕಮಲೆ:**—ಕೋಕಿಲೇ! ಎಂಥ ಕಠಿನ ಹೃದಯವೇ ನಿನ್ನದು. ಎಲ್ಲಿಯೂ ಕಾಣದೆ ಇದ್ದ ಆ ಕಾಮಬಾಣಗಳನ್ನು ನನ್ನ ಮೇಲೆ ಹಾಕಿ, ಅವನಿಗೆ ಸಹಾಯಮಾಡಬಹುದೇ! ಈ ನಡತೆಯು ನಿನಗೆ ಶೋಭಿಸದು. ಸಖೀ! ಇದು ಚಂದ್ರನಂತೆ ಬಾಡಿಸುವುದಲ್ಲ, ಪ್ರಾಣವನ್ನೇ ಹರಣಮಾಡಿ ಬಿಡುವುದು.

**ಚಿತ್ರರೇಖೆ:**—ಆ! ಇದೇನು? ಬಹು ಕೋಮಲವಾದ ಪುಷ್ಪಗಳಿಂದ ರಚಿಸಿದ ಮಾಲೆಗೆ ಮನುಷ್ಯನನ್ನು ಕೊಲ್ಲುವ ಶಕ್ತಿಯುಂಟೆ?

**ಕಮಲೆ:**—ಸಖೀ! ನಿನಗೇನು ಗೊತ್ತುಂಟೆ? ಒಂದಾನೊಂದು ದಿವಸ ನಾರದನು ತನ್ನ ವೀಣೆಗೆ ಹೂವಿನ ಮಾಲೆಯನ್ನು ಹಾಕಿಕೊಂಡು ಆಕಾಶ ಮಾರ್ಗದಲ್ಲಿ ಸಂಚರಿಸುತ್ತಿದ್ದನು. ಆ ಮಾಲೆಯು ಗಾಳಿಯ ವೇಗಕ್ಕೆ ಹಾರಿ, ಅಜರಾಜನೊಡನೆ ಕ್ರೀಡಿಸುತ್ತಲಿದ್ದ ಇಂದುಮತಿಯ ಎದೆಯ ಮೇಲೆ ಬಿದ್ದು ಅವಳನ್ನು ಕೊಂದು ಬಿಟ್ಟಿತು ಬಲ್ಲಿರಾ?

**ಕೋಕಿಲೆ:**—(ಆಶ್ಚರ್ಯದಿಂದ) ಕಮಲೇ! ಇದೇನು ಹುಚ್ಚಿಯಂತೆ ವರ್ತಿಸಹತ್ತಿದೆ.

**ಚಿತ್ರರೇಖೆ:**—ಕಮಲೆಯು ಹುಚ್ಚಳಲ್ಲ. ಕಾಮಬಾಣದಿಂದ ಪೀಡಿತರಾದ ವಿರಹಿಗಳಿಗೆ ನಿರ್ಜೀವ ಮತ್ತು ಸಜೀವ ಪದಾರ್ಥಗಳ ಜ್ಞಾನವೇ ಇರುವುದಿಲ್ಲ.

**ಕಮಲೆ:**—(ಸಿಟ್ಟಿನಿಂದ) ಸಾಕು ಬಿಡಿರೇ; ನೀವಿಬ್ಬರೂ ನನ್ನೊಡನೆ ಮಾತಾಡಬೇಡಿರಿ. ನಾನು ಈ ಮಾಲೆಗೆ ಬೇಡಿಕೊಳ್ಳುವೆನು. ಮಾಲೆಯಲ್ಲಿ ರಾಜಿಸುವ ಕುಸುಮಗಳೇ! ಸುಗಂಧವನ್ನು ಬೀರುವ ನಿಮ್ಮ ಗುಣಕ್ಕೂ ಸೌಂದರ್ಯಕ್ಕೂ ಎಲ್ಲರು ಲುಬ್ಧರಾಗಿರುವರು. ನೀವು ಮದನನ ಬಾಣಗಳಾಗಿ ವಿರಹಿಗಳನ್ನು ಕಾಡಿದ್ದರಿಂದಲೇ ಅವರು ಅಲ್ಪಾಯುಷಿಗಳಾಗಿರೆಂದು ನಿಮಗೆ ಶಾಪವನ್ನು ಕೊಟ್ಟಿರುವರು. ಈಗಾದರೂ ಎಚ್ಚರವಾಗಿರಿ. ನಿಮ್ಮ ಆಯುಷ್ಯವನ್ನು ಕಡಿಮೆ ಮಾಡುವ ಆ ದುಷ್ಟ ಮನ್ಮಥನನ್ನು ಸೇರಿ, ಜನರ ನಿಂದೆಗೆ ಗುರಿಯಾಗ ಬೇಡಿರಿ. ಇಷ್ಟೇ ನಿಮಗೆ ನನ್ನ ಪ್ರಾರ್ಥನೆಯು.

೩೦ ಪದ ಧಾಟಿ:—(सवताचि भासेमला.)

ಕರುಣದಿ ನೋಡೇ ಸದಾ | ಬೀರುತಲೇ ನೀಮೋದಾ || ಪ ||
ರಮಣೀವೃಂದವನೇ ನೀ ಕಾಡಬೇಡೇ | ಪೂಮಾಲೆಯೇ
ಸುಖನೀಡೇ || ೧ ||

ನೀನೂ ನನ್ನ ಮಾತುಗಳನ್ನು ಕೇಳದಂತಾದಿಯಾ ಉಪಾಯವಿಲ್ಲ. (ಎಂದು ಮಾಲೆಯನ್ನು ದೂರ ಬಿಸಾಡಿ ಒಗೆಯುವಳು.)

**ಸೇನಾಧೀಶನು:**—(ಪಾಶವನ್ನು ಹಿಡಿದುಕೊಂಡು ಬಂದು, ತನ್ನೊಳಗೆ) ನಾನು ರಾಜಾಜ್ಞೆಯ ಮೇರೆಗೆ ರಾಜಪುತ್ರಿಯನ್ನು ಈ ಪಾಶದಿಂದ ಕಟ್ಟಲು ಬಂದೆನು. ಈ ಗುಣಮಣಿಯನ್ನು ಮುಟ್ಟುವುದು ಹೇಗೆ? ನನ್ನ ಹಣೆಯ ಬರಹವೇ ಹೀಗಿದ್ದ ಮೇಲೆ ಮಾಡುವುದೇನು! ನಿರಪರಾಧಿಯೂ ಗುಣಿಯೂ ಆದ ಇವಳನ್ನು ಪೀಡಿಸುವುದರಿಂದ ನನ್ನ ಪಾಪವು ದ್ವಿಗುಣಿತವಾಗುವುದು. ಏನು ಮಾಡಲಿ? ಸೇವೆಯು ಬಹು ನೀಚವಾದದ್ದು; ನನ್ನನ್ನು ರಾಜನಿಗೆ ಮಾರಿ ಬಿಟ್ಟಿರುವೆನು; ನಾನು ಮಾಡುವ ಈ ದುಷ್ಟಕೃತ್ಯದ ಪಾಪವು ನನಗೆ ಹತ್ತುವುದಿಲ್ಲ. ಈ ಆಜ್ಞೆಯನ್ನು ಮಾಡಿದ ರಾಜನಿಗೆ ಹತ್ತುವುದು. ನಾನು ರಾಜಾಜ್ಞೆಯನ್ನು

ಪಾಲಿಸಲೇ ಬೇಕು. (ಎಂದು ಪ್ರಕಟವಾಗಿ) ರಾಜಪುತ್ರೀ! ನಿಮ್ಮ ಬಾಹುಗಳನ್ನು ಪಾಶದಿಂದ ಕಟ್ಟಿ, ನಿಮ್ಮನ್ನು ನಗರದಲ್ಲೆಲ್ಲ ಮೆರಿಸಲು ರಾಜಾಜ್ಞೆಯಾಗಿದೆ.

**ಕಮಲೆ:**—ಒಳ್ಳೇದು. ಹಾಗೇ ಆಗಲಿ. ಹಣೆಯ ಬರಹದಲ್ಲಿದ್ದದ್ದನ್ನು ಯಾರು ತಪ್ಪಿಸುವವರು?

**ಚಿತ್ರರೇಖೆ:**—ಸೇನಾಧೀಶರೇ! ಅವಳಿಗಾಗುವ ಶಿಕ್ಷೆಯನ್ನು ಅನುಭವಿಸಲು ನಾನು ಸಿದ್ಧಳಿರುವೆನು. (ಎಂದು ಸೇನಾಪತಿಯ ಹತ್ತಿರ ಹೋಗುವಳು.)

**ಸೇನಾಧೀಶ:**—ಮೂರ್ಖಳೇ! ಹೋಗು, ಅತ್ತಕಡೆ ನಿನ್ನನ್ನು ಕಟ್ಟಲು ನನಗೆ ರಾಜಾಜ್ಞೆಯಾಗಿಲ್ಲ. (ಚಿತ್ರರೇಖೆಯು ಸಣ್ಣ ಮೋರೆಮಾಡಿಕೊಂಡು ನಿಲ್ಲುವಳು. ಕಮಲೆಯನ್ನು ಕುರಿತು) ದಯಮಾಡಿ. ನಿಮ್ಮ ರಟ್ಟೆಗಳಿಗೆ ಪಾಶವನ್ನು ಬಿಗಿಯುವೆನು.

**ಕಮಲೆ:**—ಅದಕ್ಕೇನು, ಕಟ್ಟಬಹುದು. (ಎಂದು ಸೇನಾಧೀಶನ ಹತ್ತಿರ ಬಂದು ನಿಲ್ಲುವಳು.)

**ಕೋಕಿಲೆ:**—(ಸೇನಾಧೀಶನು ಪಾಶವನ್ನು ರಟ್ಟೆಗೆ ಸುತ್ತುವುದನ್ನು ನೋಡಿ, ದೀನಸ್ವರದಿಂದ) ಕಮಲೇ! ದಿನಾಲು ಪಂಚಪಕ್ವಾನ್ನಗಳನ್ನುಂಡು; ಹಂಸತೂಲಿಕಾತಲ್ಪದ ಮೇಲೆ ಶಯನಮಾಡಿ, ಆನಂದದಿಂದ ವೇಳೆಯನ್ನು ಕಳೆಯುವ ನಿನಗೆ ಈ ತೆರದ ಸಂಕಟವು ಪ್ರಾಪ್ತವಾಯಿತೇ! ಹಾಯ್ ದೇವಾ! ಈ ನನ್ನ ಪ್ರಿಯ ಸಖಿಯು ದುಃಖಬಡುವುದನ್ನು ನೋಡಲಾರೆನು; ಉಶ್! (ಎಂದು ಉಸರ್ಗಳೆಯುವಳು.)

**ಕಮಲೆ:**—ಸಖಿಯರೇ! ದುಃಖಿಸಬೇಡರಿ. ರಾಜನಿಷ್ಠೆ ಇದ್ದರಾಯಿತು. ಭಗವಂತನು ನಮ್ಮ ಈ ರಾಜನಿಷ್ಠೆಗೆ ಮೆಚ್ಚಿ ನಮ್ಮ ಮೇಲೆ ಬಂದ ಸಂಕಟವನ್ನು ಶೀಘ್ರ ದೂರಮಾಡುವನು. ಪರಮೇಶ್ವರನ ಮೇಲೆ ಸಹ ನಿಮ್ಮ ವಿಶ್ವಾಸವಿಲ್ಲವೇ?

**ಸೇನಾಧೀಶ:**—ಹೂ. ಮಾತಾಡುತ್ತ ನಿಲ್ಲಬೇಡರಿ. ನಡೆಯಿರಿನ್ನು. (ಎಂದು ಪಾಶವನ್ನು ಸ್ವಲ್ಪ ಜಗ್ಗುವನು.)

**ಕಮಲೆ:**—ಬಲಸಿಂಹನೇ! ನಾನೆಲ್ಲೂ ಓಡಿಹೋಗುವುದಿಲ್ಲ. ಜಗ್ಗ

ಬೇಡ, ನನ್ನ ಕರ್ತವ್ಯವನ್ನು ನಾನು ಬಲ್ಲೆನು, ರಟ್ಟೆಯು ನೋಯುತ್ತದೆ, ಸ್ವಲ್ಪ ತಡೆ. ಹೇ! ಕೋದಂಡ ರಾಮಾ! ದಯಾನಿಧೇ! ಇನ್ನೂ ನನ್ನ ಮೇಲೆ ಯಾವ ಯಾವ ಸಂಕಟಗಳನ್ನು ತರಲು ಸಿದ್ಧನಾಗಿರುವೆ? ಇಷ್ಟು ದುಃಖಪಟ್ಟ ಮೇಲೆಯೂ ನನ್ನ ವಿಷಯವಾಗಿ ನಿನಗೆ ಅಂತಃಕರಣ ಹುಟ್ಟದೇ ಹೋಯಿತೇ! ಹಾಯ್! ಹಾಯ್! ನನ್ನ ಕೋಮಲವಾದ ರಟ್ಟೆಯು ಆಗಲೇ ಎಷ್ಟು ಕೆಂಪಾಗಿದೆ ನೋಡಿದೆಯಾ? ಅನಾಥರಕ್ಷಕನೂ ಭಕ್ತವತ್ಸಲನೂ ಆದ ನೀನೇ ನನ್ನ ಮೊರೆಯನ್ನು ಕೇಳದಿದ್ದ ಮೇಲೆ ಇನ್ನಾರು ಕೇಳುವರು? ಹೇ! ದೇವಾಧಿದೇವಾ! ನಾನು ಎಲ್ಲಿಗೆ ಹೋಗಲಿ? ನನ್ನನ್ನು ರಕ್ಷಿಸುವವರಾದರೂ ಯಾರು? ನಾನು ಈ ರೀತಿ ದುಃಖಬಡುತ್ತ ಈ ಭೂಮಿಯ ಮೇಲೆ ಎಷ್ಟು ದಿವಸಗಳವರೆಗೆ ಕಾಲವನ್ನು ಕಳೆಯಬೇಕು. ಉಶ್ (ಉಸರ್ಗರೆದು) ಹೇ! ಕೃಪಾಸಾಗರಾ! ನಾನು ಸಾವಿಗೆ ಹೆದರುವುದಿಲ್ಲ. ಹುಟ್ಟಿದವರು ಎಂದಾದರೊಂದು ದಿನ ಸಾಯಲೇ ಬೇಕಲ್ಲವೆ? ಮರಣವು ನೆರಳಿನಂತೆ ಬೆನ್ನು ಹತ್ತಿಯೇ ಇದೆ. ಆದರೆ ಗುಣಿಯಾದ ಹಂಸರಾಜನ ವಿಯೋಗವು ಇಂದಿಗೆ ಆಗುತ್ತದೆಂದು ದುಃಖವಾಗುತ್ತದೆ. ಈ ಮಂದ ಭಾಗ್ಯಳಿಗೆ ಆ ಮಹಾತ್ಮನ ದರ್ಶನವು ಆಗುವ ಬಗೆ ಹೇಗೆ? ಹೇ! ದೇವಾ! ಶ್ರೀರಾಮಚಂದ್ರಾ! ನನ್ನನ್ನು ಹಡೆದ ತಂದೆಯೇ ನನ್ನ ರಟ್ಟೆಗೆ ಪಾಶವನ್ನು ಕಟ್ಟಿಸಿ ನಗರದಲ್ಲೆಲ್ಲ ಮೆರೆಯಿಸಲು ಸಿದ್ಧನಾದ ಮೇಲೆ ನನ್ನನ್ನು ರಕ್ಷಿಸುವವರಾದರೂ ಯಾರು? ಇನ್ನಾದರೂ ನಿನಗೆ ಅಂತಃಕರಣವು ಬಾರದೆ ಹೋಯಿತೇ! (ಎಂದು ರಟ್ಟೆಯ ಕಡೆಗೆ ನೋಡುತ್ತ) ದೇವಾ! ನೋಡು, ರಟ್ಟೆಯು ಎಷ್ಟು ಕೆಂಪಾಗಿದೆ. ಅಯ್ಯೋ! ಈ ನೋವನ್ನು ನಾನು ಹೇಗೆ ಸಹಿಸಲಿ? ಹೇ! ಕರುಣಾನಿಧಿಯೇ! ಬಾ, ಎಷ್ಟು ಹೊತ್ತು ಈ ರೀತಿ ನನ್ನ ಪರೀಕ್ಷೆಯನ್ನು ಮಾಡುತ್ತಿ? ಇಂದಿಗೆ ಭಕ್ತವತ್ಸಲನೆಂಬ ನಿನ್ನ ಬಿರುದು ಮುಣಗಿಹೋಯಿತೇ! ಕರುಣಾನಿಧಿಯೆಂದು ಹೆಸರಾದ ನಿನ್ನ ಹೃದಯದಲ್ಲಿ ಹರಿದಾಡುವ ಕರುಣಾರಸವು ಸಂಪೂರ್ಣವಾಗಿ ಬತ್ತಿಹೋಯಿತೇ! ಹಾಯ್! ಹಾಯ್! ಬಾ, ಬಾ ತಡ ಮಾಡಬೇಡ. ಇನ್ನು ಮೇಲೆ ನನ್ನ ಮಾನವು ಉಳಿಯದು. ದ್ರೌಪದಿಯನ್ನು ಕಾದಂತೆ ನನ್ನನ್ನು ಕಾಪಾಡು. ನೀನು ಗೋವಿಂದ

ನಲ್ಲವೆ? ಅನಾಥಳೂ ದೀನಳೂ ಆದ ನನ್ನ ರಕ್ಷಣೆಯನ್ನು ಮಾಡದಿದ್ದರೆ ಭಕ್ತವತ್ಸಲನೆಂಬ ಬಿರುದು ನಿನಗೆ ಹೇಗೆ ಸಲ್ಲುವುದು?

**೩೧ ಪದ.** ಧಾಟಿ:—(ಗತಿಯೇ ನನಗಿನ್ನು ಮತಿಹೀನಳಾದೆನು)

ಗತಿಯಾರೆನಗಿನ್ನು । ಮತಿಹೀನಳಾದೆನು । ತಾತನೆನ್ನನು ದೂಡಿದಾ ॥ ಪ ॥ ಸರಿಯಲ್ಲ ಮನವಿದು । ಮರಗುತಲಿ ಹುದಯ್ಯೋ । ಥರವೇನೊ ಪೇಳೊತ್ರೀ । ಹರಿಯೆ ಪಾಲಿಸೊ ದಯ ॥ ಸ್ಮರಿಸುವೆ ನಿನ್ನಯ । ವರನಾಮುವ ನಾನು । ವರಪದ ನೀಡುತ । ಕರುಣದಿ ಪಾಲಿಸೊ ॥ ಮರಗುತ ಬಳಲುವೆದಯಾ ಸಾಗರನೆನ್ನ । ಮರೆಯಲಾಗದು ದೇವಾ । ಕರವನ್ನು ಮುಗಿಯುವೆ ॥ ೧ ॥

**ಎಲ್ಲರೂ ಹೋಗುವರು.**



೩ನೆಯ ಅಂಕವು ಮುಗಿದುದು.





॥ ॐ ॥

॥ श्रीराम ॥

# ೪ನೆಯ ಅಂಕ.



## ಸ್ಥಳ:— ರಾಜಮಂದಿರದಲ್ಲಿಯ ಒಂದು ಭಾಗವು.

### ಪಾತ್ರಗಳು:— ಹಂಸರಾಜ ಮತ್ತು ವೀರಸೇನನು.

ಬರುವ ರೀತಿ:—(ಹಂಸರಾಜನು ಆಸನದ ಮೇಲೆ ಕುಳಿತಿರುವನು. ಹತ್ತಿರ ವೀರಸೇನನು ಕುಳಿತಿರುವನು.)

**ವೀರಸೇನ:**—ಮಿತ್ರಾ! ಇತ್ತಿತ್ತಲಾಗಿ ಕಮಲೆಯನ್ನು ನೋಡಿದಂದಿನಿಂದ ನಿನ್ನ ಮನಸ್ಸು ರಾಜ್ಯದಾಡಳತೆಯ ಕಡೆಗೆ ಇರದೆ, ರಾಜ್ಯಕಾರ್ಯಕ್ಕೆ ವಿಘ್ನವನ್ನು ತರುವ ತರುಣಿಯಳ ಮನಸ್ಸನ್ನು ಒಲಿಸುವುದರಲ್ಲಿ ಮತ್ತು ವಿಲಾಸದಲ್ಲಿಯೇ ವೇಳೆಯನ್ನು ಹಾಕುವುದು ನೋಡಿ ನನಗೆ ಬಹು ಭಯವಾಗುತ್ತಿದೆ.

**ಹಂಸರಾಜ:**—ನಿನ್ನ ಮಾತು ಸರಿಯಾಗಿಲ್ಲ.

**ವೀರಸೇನ:**—ಅದೇಕೆ?

**ಹಂಸರಾಜ:**—ಮನುಷ್ಯನ ಸೌಖ್ಯವೂ ವೈಭವವೂ ಸಾಧಾರಣವಾಗಿ ಸ್ತ್ರೀಯರನ್ನೇ ಅವಲಂಬಿಸಿದೆ. ಸ್ತ್ರೀಯರ ಹಂಬಲವನ್ನು ಸಂಪೂರ್ಣವಾಗಿ ತೊರೆಯುವುದು ಯೋಗಿಗಳಿಂದ ಸಾಧ್ಯವೇ ಹೊರತು ನಮ್ಮಂಥ ಸಂಸಾರಿಕರಿಂದ ಎಂದಿಗೂ ಆಗದು. ಇದಲ್ಲದೆ ಯುದ್ಧದಲ್ಲಿ ವೈರಿಗಳೊಡನೆ ಹೋರಾಡಿ, ಜಯಶಾಲಿಯಾಗಿ ದಣಿದು ಬಂದ ವೀರನಿಗಾಗುವ ಆನಂದವು ತನ್ನ ಪ್ರಿಯಳ ದರ್ಶನದಿಂದಲೂ ಅವಳ ಪ್ರೋತ್ಸಾಹ ಸವಿನುಡಿಗಳಿಂದಲೂ ಮತ್ತಿಷ್ಟು ಹೆಚ್ಚುವುದು. ಅದಂತೂ ಇರಲಿ. ನನ್ನ ಪ್ರಿಯತಮೆಯಾದ ಕಮಲೆಯು ಶೂರಳೂ ಜಾಣಳೂ ಇರುವುದರಿಂದ ಅವಳನ್ನು ವರಿಸಲು ಪ್ರಯತ್ನಮಾಡುವುದು ಏನು ಅನ್ಯಾಯವು?

**ವೀರಸೇನ:**— ಕಮಲಾದೇವಿಯನ್ನು ವರಿಸಬೇಕಾದರೆ, ಅವಳ ನಿಸ್ಸೀಮ ಪ್ರೇಮವು ನಿನ್ನ ಮೇಲೆ ಇರಬೇಕಲ್ಲ!! ಒಂದು ಪಕ್ಷಕ್ಕೆ ಅವಳ ಪ್ರೇಮವು ನಿನ್ನ ಮೇಲೆ ಇದ್ದದ್ದೇ ಸಹಜವಾದರೆ ಅವಳೇ ಇಲ್ಲಿಗೆ ಬರಲು ಯತ್ನಿಸುತ್ತಿದ್ದಳು ಹಾಗೂ ತನ್ನ ಮನೋರಥವನ್ನು ತಿಳಿಸುತ್ತಿದ್ದಳು.

**ಹಂಸರಾಜ:**— ಮಿತ್ರಾ! ಅವಳ ಪ್ರೇಮವು ನನ್ನ ಮೇಲೆ ಇದ್ದದ್ದು ಆ ತರುಣಿಯು ಚಂಪಾರಣ್ಯದಲ್ಲಿ ಬಹು ಆದರದಿಂದ ನನಗೆ ಅರ್ಪಿಸಿದ ಹೂವುಗಳ ಮೇಲಿಂದಲೂ ಅವಳ ಸಖಿಯರ ಸಂಭಾಷಣಗಳ ಮೇಲಿಂದಲೂ ಸ್ಪಷ್ಟವಾಗಿ ವ್ಯಕ್ತವಾಗುವುದು. ಮೇಲಾಗಿ ಭದ್ರವಾದ ಕೋಟೆಯಲ್ಲಿ ಬಳಲಿ ಬಳಲಿ ಹಂಬಲಿಸುವ ನನ್ನ ಮಾನಸಹಂಸಿಯು ಇಲ್ಲಿಗೆ ಬರುವ ಬಗೆಯಾದರೂ ಹೇಗೆ?

**ವೀರಸೇನ:**— ಈ ಸಂಗತಿ ನಿನಗೆ ಹೇಗೆ ತಿಳಿಯಿತು?

**ಹಂಸರಾಜ:**— ಗುಪ್ತಚಾರನಾಗಿ ಕುಮತಿಯ ಕಡೆಗೆ ಕಳಿಸಿದ ಶೂರಸೇನನಿಂದ. ಆ ಮನೋಹಾರಿಣಿಯು ಧನಿಕನಾದ ಕುಮತಿಯನ್ನು ಲಗ್ನವಾಗುವುದಕ್ಕೆ ಸಮ್ಮತಿಸದೆ, ನನ್ನನ್ನೇ ಲಗ್ನವಾಗುತ್ತೇನೆಂದು ಹಟತೊಡಲಾಗಿ; ಆ ಮೂರ್ಖನಾದ ಚಂದ್ರಶೇಖರನು ಅವಳನ್ನು ಭದ್ರವಾದ ದುರ್ಗದಲ್ಲಿ ಇಟ್ಟಿರುವನು. ಆದರೂ ಆ ಚಾರುಗಾತ್ರಿಯು ನನ್ನನ್ನೇ ನಂಬಿರುವಳು. ಆ ಸುಂದರ ಮೂರ್ತಿಯ ಮಂದಹಾಸವೂ ಅಂದನೋಟವೂ ನನ್ನ ಮನದಲ್ಲಿ ಚಿತ್ರಿತವಾಗಿವೆ.

ರಾಗ:— ಛಾಯನಟ ಆದಿತಾಳ.

**೩೨ ಪದ:**— ಧಾಟಿ (ಮನೇಬಾಗಿಲದೊಳು ಬಂದು ನಿಂತಿಹಳು.)

ಮನೋಹಾರಿಯ ಮೊಗ ಹಾವ ಭಾವಗಳು
ಮನುಜರ ವಿರಹ ತಾಪವ ಬಲಿಸುತಿಹುದು ‖ ಪ ‖

ಅವಳನ್ನು ಹೇಗೆ ಮರೆಯಲಿ. ಅವಳನ್ನು ಹೇಗಾದರೂ ಮಾಡಿ ಸೇರದ ಹೊರತು ನನ್ನ ಪ್ರಾಣವು ನಿಲ್ಲದು.

ಕಮಲೆಯ ವದನವು ಗೆಲಿಯೆ ಸರೋಜವ ।
ಕಮಲಜ ತಾಳದೆ ಕೋಪವನು ।
ಕಮಲಗಳೆಸೆಯಲವೇ ಜಗಕಾಡುವ ।
ಸುಮನೋ ಬಾಣಂಗಳಾದವೋ ಸಖ ‖ ೧ ‖

**ವೀರಸೇನ:**— ಹಂಸಾ! ಅವಳ ಸಮಾಗಮದಲ್ಲಿ ಇಷ್ಟು ಆತುರನಾಗ ಬಾರದು. ಚಂಪಕನಗರವು ನಿನ್ನ ವೈರಿಯಾದ ಚಂದ್ರಶೇಖರನದಿರುವುದರಿಂದ ವಿಚಾರಮಾಡದೆ, ಅಲ್ಲಿಗೆ ಹೋಗುವುದು ನನಗೇನೂ ಸರಿದೋರುವುದಿಲ್ಲ. ತಿಳಿದು ನೋಡು. ನೀನು ದೊಡ್ಡ ರಾಜನಿರುವಿ. ನಿನ್ನನ್ನು ಆಶ್ರಯಿಸಿದ ಪ್ರಜೆಗಳ ಕಲ್ಯಾಣದ ಕಡೆಗೆ ಲಕ್ಷ್ಯಕೊಡು. ಹೀಗೆ ನಿನ್ನ ಕರ್ತವ್ಯಕರ್ಮದಿಂದ ವಿಮುಖನಾಗಬೇಡ. ಪ್ರಜೆಗಳ ವ್ಯಥೆಯನ್ನು ದೂರಮಾಡುವ ರಾಜನಾದವನು ಹೀಗೆ ಕಾಮಾತುರನಾಗಿ ವ್ಯಥೆ ಪಡಹತ್ತಿದನೆಂದರೆ, ಅವನ ಸಂಕಟವನ್ನು ಆರು ಪರಿಹರಿಸುವರು? ತಾಯಿಯು ತನ್ನ ಗರ್ಭದಲ್ಲಿದ್ದ ಕೂಸನ್ನು ಪೋಷಿಸುವಂತೆ ನೀನು ನಿನ್ನ ಪ್ರಜೆಗಳನ್ನು ರಕ್ಷಿಸು. ಒಬ್ಬ ಕಾಮಿನಿಯ ಹಿತಕ್ಕಾಗಿ ಇಲ್ಲವೆ, ಸ್ವಾರ್ಥಕ್ಕಾಗಿ ಮಾಡಬಾರದ ಕಾರ್ಯಗಳನ್ನು ಮಾಡಿ ಪ್ರಜೆಗಳ ಮನಸ್ಸನ್ನು ನೋಯಿಸಬೇಡ. ಮನಸ್ಸೆಂಬ ಪಾತ್ರೆಗೆ ಕಾಮಕ್ರೋಧಾದಿಗಳೆಂಬ ಕಲ್ಲುಗಳು ತಾಕಿ, ಮೇಲಿಂದಮೇಲೆ ಅದಕ್ಕೆ ಸಣ್ಣ ಸಣ್ಣ ಛಿದ್ರಗಳು ಬೀಳುವುದುಂಟು. ಆದರೆ ನೀನು ಅಲ್ಲಿ ಅಡಗಿರುವ ಜ್ಞಾನವೆಂಬ ಸುಧೆಯು ಸೋರಿಹೋಗುವುದರೊಳಗಾಗಿ ನಿಗ್ರಹ, ದಕ್ಷತೆ, ಕ್ಷಮೆ, ದಮೆ ಮೊದಲಾದ ಸಾಮುಗ್ರಿಗಳಿಂದ ಆ ಪಾತ್ರೆಯನ್ನು ಸರಿಮಾಡು. ಸ್ತ್ರೀಲಂಪಟನಾದ ಮನುಷ್ಯನಿಗೆ ಈ ಜಗತ್ತಿನಲ್ಲಿ ಎಲ್ಲ ತರದ ಹಾನಿಗಳು ಬರುವುದುಂಟು. ಇದೇನು ಹಾಸ್ಯವಲ್ಲ!! ವೇಸರಾಜನ ಮರಣವು ಸ್ತ್ರೀಯಳಿಂದಲೇ ಆಗಿದೆ. ಸ್ತ್ರೀ ಜಾತಿಯ ಮೇಲೆ ನನ್ನ ನಂಬುಗೆಯೇ ಇಲ್ಲ.

**ಹಂಸರಾಜ:**— ನೀನು ಹೇಳುವ ಉಪದೇಶವೆಲ್ಲ ನನಗೆ ಶಿರಸಾ ಮಾನ್ಯವಿದೆ. ಆದರೆ ಎಲ್ಲಾ ಸ್ತ್ರೀಯರನ್ನೇಕೆ ದೋಷಕ್ಕೆ ಗುರಿಮಾಡುತ್ತಿ? ಒಂದು ವ್ಯಕ್ತಿಯ ಉದಾಹರಣದ ಮೇಲಿಂದ ಯಾವತ್ತೂ ಸ್ತ್ರೀಜಾತಿಯ ಮೇಲೆ ನಂಬುಗೆಯನ್ನು ಇಡದಿರುವುದು ನನಗೇನು ನ್ಯಾಯವಾಗಿ ತೋರುವುದಿಲ್ಲ. ಸ್ತ್ರೀಯರ ಸಾಧಾರಣ ಚರಿತ್ರೆಯನ್ನು ನೋಡಲಾಗಿ, ಎಷ್ಟೋ ಯುದ್ಧಗಳು ಅವರ ಮಾನಾಭಿಮಾನಕ್ಕಾಗಿಯೇ ಸಂಭವಿಸಿವೆ. ನಮ್ಮ ಸೂರ್ಯಕುಲತಿಲಕನಾದ ಶ್ರೀ ರಾಮಚಂದ್ರನು ಸೀತಾದೇವಿಯ ಸಲುವಾಗಿ ರಾವಣನೊಡನೆ ಅಘೋರ ಯುದ್ಧವನ್ನು ಮಾಡಿದನು. ಬಲಾಢ್ಯನಾದ

ಭೀಮಸೇನನು ದ್ರೌಪದಿಯ ಪಣವನ್ನು ಗೆಲ್ಲುವುದಕ್ಕಾಗಿ ತನ್ನ ಅತುಲ ಬಾಹು ಸಾಮರ್ಥ್ಯವನ್ನು ಯುದ್ಧದಲ್ಲಿ ತೋರಿಸಿದನು. ಇವಲ್ಲದೆ ಶೂರರು ತಮ್ಮ ತಮ್ಮ ವೀರಪತ್ನಿಯರ ಕಡೆಯಿಂದ ಆರುತಿಗಳನ್ನು ಮಾಡಿಸಿಗೊಳ್ಳುವುದು ತಮಗೆ ಬಹುಮಾನವೆಂದು ತಿಳಿದುಕೊಳ್ಳುತ್ತಾರೆ. ಸ್ತ್ರೀಯರ ಅಮೋಘ ಚರಿತ್ರೆಯ ಉದಾಹರಣೆಗಳಂತೂ ನಮ್ಮ ಇತಿಹಾಸಗಳಲ್ಲಿ ಅನೇಕವಾಗಿವೆ. ಮಿತ್ರಾ! ನಮ್ಮ ಆರ್ಯಲಲನಾಮಣಿಗಳಲ್ಲಿ ಸಾವಿತ್ರಿಯೆಂಬವಳು ತನ್ನ ಪತಿಯ ಸೇವೆಯನ್ನು ಏಕನಿಷ್ಠೆಯಿಂದ ಮಾಡಿ, ಪತಿವ್ರತೆಯೆಂಬ ಅಲೌಕಿಕ ಕೀರ್ತಿಯನ್ನು ಪಡೆದು ಈ ಜಗತ್ತಿನ ಪೂಜ್ಯತೆಗೆ ಪಾತ್ರಳಾಗಿರುವಳು. ಇದಲ್ಲದೆ ಹಿರಿಯರು ತಮ್ಮ ಕುವರಿಯರನ್ನು ಹರಿಸುವಾಗ "ಮುತ್ತೈದಿಯಾಗು, ಸಾವಿತ್ರಿಯಾಗು," ಎಂದು ಪ್ರೇಮಪೂರ್ವಕವಾಗಿ ಉಚ್ಚರಿಸುವ ರೂಢಿಯು ಬಹು ದಿವಸದಿಂದ ನಮ್ಮಲ್ಲಿ ನಡೆಯುತ್ತ ಬಂದಿದೆ. ಇಂಥ ಪತಿವ್ರತೆಯರ ಮಹಿಮೆಯಿಂದಲೇ ಈ ನಮ್ಮ ಪವಿತ್ರವಾದ ಭರತಖಂಡಕ್ಕೆ ಅಜರಾಮರ ಕೀರ್ತಿಯು ಪ್ರಾಪ್ತವಾಗಿದೆ. ವೀರಸೇನಾ! ಪತಿವ್ರತೆಯರ ಅಗಾಧ ಚರಿತ್ರೆಯನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ!!

**೩೩ ಪದ.** ಧಾಟಿ:—(**होत नय काल महा काला**)

ನಾರಿಯರೆ ನೋಡು ಮಹಾತೇಜಾ ।
ವರಪತಿ ಸೇವಾ ನಿರತಳಾದ ತರುಣಿಯಳೆ ಭೂಮಿಗೆ ತೇಜಾ
॥ ಪ ॥

ಇನಿಯನಿಗಾದಾ । ಮನದಾಯಾಸವ ಭಾಮಾ ।
ಮಣಿಯೇ ನೀಗುತಿಹಳು ಧರಾತಲದಿಧೀರಾ ॥ ೧ ॥

ನನ್ನ ರಮಣಿಯು ಬಹು ಗುಣಾಢ್ಯಳು ಅವಳು ದುಷ್ಟನ ಕೈಲಿ ಸಿಕ್ಕು ನರಳುವಳು. ಅವಳನ್ನು ಬಿಡಿಸುವುದು ಕ್ಷತ್ರಿಯನಾದ ನನ್ನ ಧರ್ಮವಲ್ಲವೆ? ನಾನಾದರೂ ಪೂರ್ವಜರು ಹಾಕಿದ ಉದಾಹರಣವನ್ನೇ ಅನುಸರಿಸುತ್ತೇನೆ.

**ವೀರಸೇನ:**—ಏನೇ ಇರಲಿ. ನಿನ್ನ ವೈರಿಯ ಮಗಳ ಹಂಬಲವನ್ನು ಬಿಟ್ಟುಬಿಡು. ಇಷ್ಟೇ ನನ್ನ ಉಪದೇಶವು.

**ಹಂಸರಾಜ:**— ಹೀಗೇಕೆ ನಿಷ್ಠುರನಾಗುವಿ? ನಾನು ಆ ಸುಂದರಾಂಗಿಯ ವಿರಹವನ್ನು ತಾಳಲಾರೆನು. ಆ ಚಾರುಗಾತ್ರಿಯು ನನ್ನ ಮನಸ್ಸನ್ನು ತನ್ನ ಕಡೆಗೆ ಎಳೆದುಕೊಂಡದ್ದಲ್ಲದೆ, ನನ್ನ ಹೃದಯಸಿಂಹಾಸನಾರೂಢಳಾಗಿ ಯಾವತ್ತೂ ಇಂದ್ರಿಯಗಳ ಮೇಲೆ ತನ್ನ ಅಧಿಕಾರವನ್ನು ನೆಲೆಗೊಳಿಸಿದ್ದಾಳೆ. ಮಿತ್ರಾ! ನಾನು ಎನ್ನುವುದೇನೂ ಅಸತ್ಯವಲ್ಲ. ಈಗ ನಾನು ನಿನ್ನೊಡನೆ ಮಾತನಾಡುತ್ತಿದ್ದರೂ ನನ್ನ ಧ್ಯಾನವೆಲ್ಲ ಆ ತರುಣಿಯ ಕಡೆಗೇ ಇದೆ. ಅವಳ ಮೋಹಕ ರೂಪವು ನನ್ನ ಕಣ್ಣೆದುರಿಗೆ ಕಟ್ಟಿದೆ. ಪೌರ್ಣಿಮೆಯ ಚಂದ್ರನ ಸೌಭಾಗ್ಯವನ್ನು ಜರೆಯುವ ಅವಳ ಮುಖವೂ ಸುಂದರವಾದ ಕೇದಿಗೆಯಂತಿರುವ ಅವಳ ಅಂಗಕಾಂತಿಯೂ ಮನಸ್ಸನ್ನು ಸೆಳೆದುಕೊಳ್ಳುವ ಅವಳ ನೋಟವೂ ಆ ಮನೋರಮೆಯ ಸೌಂದರ್ಯವನ್ನು ಹೆಚ್ಚಿಸಿದ್ದಲ್ಲದೆ, ರಣದಲ್ಲಿ ವೀರರ ಶಸ್ತ್ರಗಳಿಗೆ ಮಣಿಯದಿದ್ದ ಈ ನನ್ನ ಕಠಿನಹೃದಯವನ್ನು ನಿರಾಯಾಸವಾಗಿ ಕರಗಿಸಿಬಿಟ್ಟಿವೆ. ಮಿತ್ರಾ! ನನ್ನ ದೇಹಸ್ಥಿತಿಯನ್ನಾದರೂ ನೋಡು. ಅವಳ ಚಿಂತೆಯಿಂದ ಸಣ್ಣಾಗಿರುವ ನನ್ನನ್ನು ನೋಡು. ಇದು ಅವಳ ವಿರಹದಿಂದಲೇ ಎಂದು ತಿಳಿ. ಏನು ಮಾಡಲಿ! ನನ್ನ ಮನಸ್ಸಿಗೆ ಸ್ವಲ್ಪ ಸಹ ಸಮಾಧಾನವಿಲ್ಲ. ನಾನು ಆ ಗುಣಿಯ ಆಶೆಯನ್ನು ಬಿಡುವುದೆಂದರೆ ನನ್ನ ಜೀವದ ಆಶೆಯನ್ನೇ ತೊರೆದು ಬಿಡುವುದೆಂದು ತಿಳಿ. ವೀರಸೇನಾ! ಏನು ಹೇಳಲಿ, ಅವಳಂತಹ ಸುಂದರಿಯು ಮೂರು ಲೋಕಗಳಲ್ಲಿಯೂ ದೊರೆಯಲಿಕ್ಕಿಲ್ಲ.

**೩೪ ಪದ:** ಧಾಟಿ:—(**लोळत कच मुख मधुवरी**)

ನೀರೆಯ ಸೊಬಗಿನ ವದನದ ।
ಚಾರುತೇಜ ಶಶಿಯು ನೋಡಿ ।
ಸೊರಗಿ ಬಾಡಿ ।ಮರುಳನಾಗಿ ತಾಸದಾ ।
ಚರಿಪ ನೋಡು ॥ ಪ ॥
ಸ್ಮರಿಪಳೋ ಹರಿಯನಾಮು ।
ಚಾರುರೂಪ ತಾಳುವುದಕೆ ।
ಗಿರಿಯತಾಳಿ ಧರಣಿತಾನು ।
ಸರಸಿಜ ಮುಖಿಯಳ ಮುಖನೋಡಿಯೆ ॥ ೧ ॥

ನನ್ನನ್ನು ಕಾಡುವ ಆ ದುಷ್ಟಕಾಮನಿಗೆ ಬಲವನ್ನು ಕೊಟ್ಟು ಹುರಿದುಂಬಿಸುವವಳೇ ಆ ಕಮಲೆಯು. ಅವಳೇ ನನ್ನ ಪಂಚಪ್ರಾಣವು. ಅವಳಿಲ್ಲದೆ ನನ್ನ ಪ್ರಾಣವು ಹೇಗೆ ನಿಲ್ಲುವುದು?

**ವೀರಸೇನ:**— ರಾಜರ ಪಂಚಪ್ರಾಣವು ಸ್ತ್ರೀಯಳಲ್ಲ. ಪ್ರಜೆಗಳೇ ಸರಿ. ನೀನು ಬಹು ಬೆಲೆಯುಳ್ಳ ವಸ್ತುಗಳನ್ನೂ ಉಡುಪುಗಳನ್ನೂ ಧರಿಸಿ, ರತ್ನಮಾಲೆಗಳನ್ನು ಕೊರಳಲ್ಲಿ ಹಾಕಿಕೊಂಡು ಸಿಂಹಾಸನದ ಮೇಲೆ ಬಹು ಅಟ್ಟಹಾಸದಿಂದ ಕುಳಿತು ರಾಜಿಸಿದಿಯೆಂದರೆ ಯೋಗ್ಯ ರಾಜ್ಯನಾದೆನೆಂದು ತಿಳಿದಿರುವಿಯೇನು?

**ಹಂಸರಾಜ:**— ಛೆ! ಹಾಗಲ್ಲ. ಪ್ರಜೆಗಳ ಮೇಲೆ ಬಂದ ಸಂಕಟವನ್ನು ದೂರಮಾಡಿ, ಅವರ ಮನಸ್ಸನ್ನು ರಂಜಿಸುವವನೇ ರಾಜನು. ಜನರು ನನಗೆ ರಾಜನೆಂದರೆ ನಾನು ರಾಜನಾಗ ಬಲ್ಲೆನೇ? ಈ ಯಾವತ್ತೂ ಲೋಕಗಳಿಗೆ ಒಡೆಯನಾದ ದೇವರೇ ನಮ್ಮೆಲ್ಲರಿಗೆ ಪ್ರಭುವಾಗಿರುವನು. ನಾನು ಆ ಮಹಾತ್ಮನ ದೂತನು. ಅವನು ನನ್ನನ್ನು ಈ ರಾಜಸಿಂಹಾಸನದ ಮೇಲೆ ಕುಳ್ಳಿರಿಸಿ, ನನ್ನ ಕೈಯಲ್ಲಿ ರಾಜದಂಡವನ್ನು ಕೊಟ್ಟದ್ದು,-ಶೃಂಗಾರಚೇಷ್ಟೆಯಲ್ಲಿ ವೇಳೆಯನ್ನು ಕಳೆಯುವುದಕ್ಕಲ್ಲ; ಗುಣಿಗಳ ಮನಸ್ಸಿಗೆ ತಾಪವನ್ನು ಕೊಡುವ ದುಷ್ಟರನ್ನು ದಂಡಿಸಿ, ಸಜ್ಜನರನ್ನು ಪಾಲಿಸುವುದರ ಸಲುವಾಗಿಯೇ ಸರಿ. ಎಲ್ಲ ಬಗೆಯಿಂದಲೂ ಸಂಪೂರ್ಣವಾಗಿ ನನ್ನನ್ನು ನಂಬಿದ ಪ್ರಜೆಗಳಿಗೆ ಅಕಲ್ಯಾಣವನ್ನು ಮಾಡುವುದು ನನ್ನಿಂದ ಎಂದಾದರೂ ಆದೀತೇ? ಒಂದು ವೇಳೆ ಜನರ ಅಪರಾಧವಾಗಿದ್ದರೂ ನಾನು ಅಷ್ಟ ಪ್ರಧಾನರೊಡನೆ ಆ ದೋಷಗಳ ಪೂರ್ಣ ವಿಚಾರಮಾಡದೆ, ಅವರನ್ನು ದಂಡಿಸುವುದಿಲ್ಲ. ಇದೆಲ್ಲ ನಿನಗೆ ಗೊತ್ತಿದ್ದು ಈ ಪ್ರಕಾರ ನನ್ನನ್ನು ಹಳಿಯಬೇಕೇ? ಪ್ರಜೆಗಳ ಕಲ್ಯಾಣವೇ ನನ್ನ ಕಲ್ಯಾಣವು. ಅವರ ದುಃಖವೇ ನನ್ನ ದುಃಖವು.

**ವೀರಸೇನ:**— ಇಷ್ಟೆಲ್ಲ ನಿನಗೆ ಗೊತ್ತಿದ್ದು ಆ ತರುಣಿಯ ಮೋಹಪಾಶದಲ್ಲಿ ಬಿದ್ದು ನಿನ್ನ ಪ್ರಜೆಗಳ ಮೇಲೆ ಸಂಕಟವನ್ನು ತರಲು ಸಿದ್ಧನಾಗಿರುವೆಯಲ್ಲ! ಹಂಸಾ! ದಯಮಾಡಿ ಆ ತರುಣಿಯ ಹಂಬಲವನ್ನು ಬಿಟ್ಟುಬಿಡು. ಅವಳನ್ನು ಲಗ್ನವಾಗುವುದರಿಂದ ನಿನಗೆ ರಾಜ್ಯಲಾಭ ಇಲ್ಲವೆ ದ್ರವ್ಯದ ಲಾಭವೇನಾದರೂ ಆಗುವುದೇನು?

**ಹಂಸರಾಜ:**— ನೀನು ಏನೂ ತಿಳಿಯದವನು. ಲಗ್ನವಾಗುವುದು ಐಹಿಕಕ್ಕೆಂದು ತಿಳಿದೆಯಾ? ತಂತಿಯಿಲ್ಲದೆ ವೀಣೆಯಲ್ಲಿ ನಾದಹುಟ್ಟದು. ರಥವು ಚಕ್ರವಿಲ್ಲದೆ ಮುಂದೆ ನಡೆಯದು. ಪತ್ನಿಯಿಲ್ಲದೆ ಮನುಷ್ಯನು ಬಾಳನು. ಸ್ತ್ರೀರತ್ನವು ದುಷ್ಕುಲದಲ್ಲಿದ್ದರೂ ಅವಳನ್ನು ಪರಿಗ್ರಹಿಸಬಹುದೆಂದು ಶಾಸ್ತ್ರವು ಹೇಳುತ್ತಿದೆ. ಕಮಲೆಯು ಮಹಾಗುಣೆಯು; ಕಮಲವು ಸೂರ್ಯನನ್ನು ಬಯಸುವಂತೆ ನನ್ನನ್ನು ಬಯಸುವಳು. ಆ ತರುಣಿಯಲ್ಲಿ ಧನವಿಲ್ಲದಿದ್ದರೂ ಅವಳನ್ನೇ ನಾನು ಲಗ್ನವಾಗುವೆನು ಮಿತ್ರಾ! ನಾನು ಅನ್ಯರ ದ್ರವ್ಯಕ್ಕೆ ಇಲ್ಲವೆ ರಾಜ್ಯಕ್ಕೆ ಆಶೆಮಾಡುವವನಲ್ಲ. ಲಕ್ಷ್ಮಿಯು ಚಂಚಲಳಿದ್ದು ಒಬ್ಬರ ಮನೆಯಲ್ಲಿಯೂಸ್ಥಿರವಾಗಿನಿಲ್ಲುವವಳಲ್ಲ. ಗುಣವು ಮಾತ್ರ ಹೆಚ್ಚಿನದು. ಗುಣದ ಬೆಲೆಯು ದ್ರವ್ಯಕ್ಕಿಂತ ಹೆಚ್ಚಿನದೆಂದು ನಾನು ತಿಳಿಯುತ್ತೇನೆ. ಮನೆತನದ ಶೀಲವನ್ನೂ ಗುಣಾವಗುಣದ ವಿಚಾರವನ್ನೂ ಲಕ್ಷ್ಯಕ್ಕೆ ತಾರದೆ, ಕೇವಲ ದ್ರವ್ಯದಾಶೆಗಾಗಿ ನೀತಿಮಾರ್ಗವನ್ನು ಸರ್ವಥಾ ಬಿಡಬಾರದು. ದ್ರವ್ಯ ಶೋಧನಕ್ಕಿಂತ ಗುಣಶೋಧನವು ಜನರಿಗೆ ಹೆಚ್ಚು ಹಿತದಾಯಕವು. ಗುಣವೆಂದರೆ ಮನುಷ್ಯರನ್ನು ರಂಜಿಸುವ ಪರಿಮಳಯುಕ್ತವಾದ ಪುಷ್ಪವೇ ಸರಿ. ಒಂದುವೇಳೆ ಸುಗುಂಧಯುಕ್ತವಾದ ಪುಷ್ಪವು ಬಾಡಿದರೂ ಬಾಡಬಹುದು. ಆದರೆ ಗುಣವೆಂಬ ಪುಷ್ಪವು ಎಂದೆಂದಿಗೂ ಬಾಡದು. ಕಮಲೆಯು ಸುಗುಣಗಳ ತವರಮನೆಯೇ ಆಗಿದ್ದರಿಂದ ನನ್ನ ಮನಸ್ಸು ಅವಳ ಕಡೆಗೆ ಧಾವಿಸಲು ಆತುರವಾಗಿದೆ. ಅವಳಲ್ಲಿ ನೆಟ್ಟ ನನ್ನ ಮನಸ್ಸನ್ನು ಬೇರೆ ಕಡೆಗೆ ತಿರಿಗಿಸಲಾರೆನು. ಯಾಕಂದರೆ,—

ರಾಗ:— ತೇಲಂಗ ತ್ರಿತಾಲ.

**೩೫ ಪದ.** ಧಾಟಿ:— (**अपने सालगन मोरे गिरलो**)

ಸಖನೆ ಪೂಶರನ ಶರತಾಳದೆ |
ಶೋಕ ಬಡುವೆ ಗತಿಯಾರೆನಗೆ || ಪ ||
ಮನದೊಳು ಜನಿಸಿದ | ಮನುಮಥನೆ ಎನಗೆ
ಘನವೈರಿಯಾಗಿ | ಜನಿಸಿದಾಲಯಕ್ಕೆ
ಅನುದಿನ ಶರಬಿಡುವ, ಮತಿ ಹೀನನಂತೆ || ೧ ||

ಮಿತ್ರಾ! ತೀಕ್ಷ್ಣವಾದ ಶರಗಳ ಹೊಡತವನ್ನು ತಾಳಿದರೂ ತಾಳಬಹುದು. ಆದರೆ ಕಾಮಬಾಣಗಳ ವೇದನೆಯನ್ನು ತಾಳಿಕೊಳ್ಳುವುದು ಬಲು ಕಷ್ಟ.

**ವೀರಸೇನ:**— ನೀನು ವೀರಾಧಿವೀರನಿದ್ದು ಎದುರಿಗೆ ಬಾರದೆ ಯುದ್ಧ ಮಾಡುವ ಆ ಹೇಡಿಗೆ ಹೆದರಬೇಕೆ? ಆ ಮದನನಿಗೆ ಹೂವುಗಳೇ ಬಾಣಗಳಾಗಿ ರುವವಲ್ಲ! ಎಂದ ಮೇಲೆ ನಿನಗೆ ವ್ಯಥೆ ಹೇಗೆ ಆಗುವುದು.?

**ಹಂಸರಾಜ:**— ಮಿತ್ರಾ! ಆ ಹೂವಿನ ಸರಳ ಏಟಿನ ವೇದನೆಯನ್ನು ನೀನು ಅರಿಯೆ. ಆ ದುಷ್ಟ ಮನ್ಮಥನು ಆ ಕಮಲೆಯ ಹುಬ್ಬೆಂಬ ಬಿಲ್ಲಿನಲ್ಲಿ ಆಕೆಯ ಕುಡಿನೋಟಗಳೆಂಬ ಬಹು ತೀಕ್ಷ್ಣವಾದ ಶರಗಳನ್ನು ಹೂಡಿ ನನ್ನ ಮೇಲೆ ಬಿಟ್ಟಿದ್ದಾನೆ. ನಾನು ಇಂತಹ ಬಾಣಪಾತಕ್ಕೆ ಯಾವ ಯುದ್ಧದಲ್ಲಿಯೂ ಗುರಿಯಾಗಲಿಲ್ಲ.

**ವೀರಸೇನ:**— ಒಳ್ಳೇದು. ಈಗ ನಿನಗಾಗುವ ವ್ಯಥೆಯು ಕಡಮೆ ಯಾಗುವುದಾದರೂ ಹೇಗೆ?

**ಹಂಸರಾಜ:**— ಕಂಟಕದಿಂದ ಕಂಟಕವನ್ನು ದೂರಮಾಡುವಂತೆ ಅವಳ ನೋಟವೇ ನನ್ನ ಅಂತಃಕರಣದಲ್ಲಿ ನೆಟ್ಟಬಾಣದ ಅಲಗನ್ನು ತೆಗೆದು ಹಾಕು ವುದು. ಇದರ ಹೊರ್ತಾಗಿ ಬೇರೆ ಉಪಾಯವೇ ಇಲ್ಲ. ನಾನಂತೂ ಆ ಸುಂದರಾಂಗಿಯ ಬಿಡುಗಡೆಯನ್ನು ಮಾಡಲು ಹೊರಟಿರುವೆನು. ಗುಣಿಯಾದ ಅವಳು ಸಂಕಟಪಡುತ್ತಿರುವುದನ್ನು ಉಪೇಕ್ಷೆಯಿಂದ ನೋಡುತ್ತಿರುವುದು ನನ್ನಿಂದಾಗದು. ವೀರಸೇನಾ! ನೀನು ನಿನ್ನ ಮನಸ್ಸಿಗೆ ಬಂದಂತೆ ಮಾಡು. ನೀನು ನನ್ನೊಡನೆ ಬರಲೇ ಬೇಕೆಂದು ನಾನೇನು ನಿನಗೆ ಆಗ್ರಹ ಮಾಡುವುದಿಲ್ಲ. ಇತ್ತಿತ್ತ ಲಾಗಿ ನೀನು ನನ್ನ ಸ್ವಭಾವದ ವಿಷಯವಾಗಿ ಇಲ್ಲದ್ದೊಂದು ವಿಕಲ್ಪನೆಯನ್ನು ಮಾಡುವುದರಲ್ಲಿ ತೊಡಗಿರುವಿ. ನಾನು ಸಿಟ್ಟಿಗೆದ್ದರೆ ನಿನಗೆ ಆನಂದವಾಗುವುದು. ಉಪಾಯವಿಲ್ಲ. ಸಖನೇ! ನಾನು ನನ್ನ ದೆಸೆಯಿಂದ ಬಳಲುವ ಒಬ್ಬ ಅಬಲೆ ಯನ್ನು ಸಹ ರಕ್ಷಿಸಲು ಅಸಮರ್ಥನಾದ ಮೇಲೆ ಈ ರಾಜ್ಯವನ್ನಾದರೂ ಹೇಗೆ ಕಾಪಾಡುವೆನು? ಮೇಲಿಂದ ಮೇಲೆ ನನ್ನನ್ನು ಈ ರೀತಿ ಕಾಡುವುದು ನ್ಯಾಯವೇ ನೀನೇ ಹೇಳು.

**ವೀರಸೇನ:**— ಮಿತ್ರಾ! ಸಿಟ್ಟಾಗ ಬೇಡ. ಸ್ವಲ್ಪ ವಿನೋದವನ್ನು

ಮಾಡಿದೆನು. ಇಗೋ!! ನಾನಾದರೂ ನಿನ್ನ ಇಚ್ಛೆಯನ್ನು ಪೂರ್ಣಮಾಡಲು ಸಿದ್ಧನಿದ್ದೇನೆ.

**ಹಂಸರಾಜ:**—(ನಗುತ್ತ) ಇರಲಿ ಬಿಡು. ಈಗ ನೀನು ನನಗೆ ನಿಜವಾದ ಮಿತ್ರನಾದೆ.

**तेनामृतमिदं सृष्टं मित्रमित्यक्षरद्वयम् ।**
**आपदां हि परित्राणं मनस्संताप भेषजम् ॥ १ ॥**

ಎನ್ನುವ ಮಾತಿನ ಅರ್ಥವು ಈಗ ಮನದಟ್ಟಂತಾಯಿತು. ಮಿತ್ರಾ! ನಾನು ಚಂಪಕನಗರಕ್ಕೆ ಹೊರಡುವ ಮೊದಲು ತಾಯಿಯ ಆಶೀರ್ವಾದವನ್ನು ಸ್ವೀಕರಿಸಲು ಹೋಗುವ ನಡೆ.

**ವೀರಸೇನ:**—ನಿನ್ನ ಇಷ್ಟವಿದ್ದಂತೆಯಾಗಲಿ. ಹಂಸಾ! ಏಳು, ರಾಜ ಪೋಷಾಕಗಳನ್ನು ಹಾಕಿಕೊ; ಮಾತೃದೇವಿಯವರ ದರ್ಶನಕ್ಕೆ ಇದೇ ಸಮಯ.

**ಹಂಸರಾಜ:**—(ಆಸನದ ಮೇಲಿದ್ದ ಉಡುಪುಗಳನ್ನು ಹಾಕಿಕೊಂಡು) ನಡೆ. (ಎಂದು ಇಬ್ಬರೂ ಹೊರಟು ಹೋಗುವರು.)

## ೨ನೆಯ ಪ್ರವೇಶವು.

### ಸ್ಥಳ:—ಸುಶೀಲಾ ಮಹಾರಾಣಿಯ ಮಂದಿರಕ್ಕೆ ಹೋಗುವ ಹಾದಿಯು.

ಪಾತ್ರಗಳು:—**ಹಂಸರಾಜ, ವೀರಸೇನ ಮತ್ತು ಕೋಕಿಲೆಯು.**

ಬರುವ ರೀತಿ:—(ಉತ್ತಮ ಉಡುಪುಗಳನ್ನು ಧರಿಸಿದ ಹಂಸರಾಜನು ವೀರಸೇನನೊಡನೆ ಬರುವನು.)

---

**ವೀರಸೇನ:**—ಹಂಸಾ! ಮಾತೃದೇವಿಯ ಮಂದಿರದ ಮುಂದಣ ಶೋಭೆಯು ಮನಸ್ಸನ್ನು ಒಂದು ಕ್ಷಣದಲ್ಲಿ ತನ್ನ ಕಡೆಗೆ ಎಳೆದುಕೊಳ್ಳುವುದು.

**ಹಂಸರಾಜ:**—ಮದನನ ಬಾಣಗಳಿಂದ ಪೀಡಿತರಾದ ವಿರಹಿಗಳ ಚೇಷ್ಟೆಯು ಈ ಶಾಂತವಾದ ಸರೋವರದಲ್ಲಿ ಸಹ ಕಂಡುಬರುವುದು. ಪ್ರತಾಪ

ಶಾಲಿಯಾದ ಸೂರ್ಯನ ಅವಸ್ಥೆಯನ್ನು ನೋಡು.

ರಾಗ:—ಜಿಂಝೋಟಿ.

**೩೬ ಪದ.** ಧಾಟಿ:—(ಶೋಭಿನೋಡಿದೆಯಾ)

ನೀನು ನೋಡಿದೆಯಾ ಈ ಚೋರ ರವಿಯ ॥ ಪ ॥
ತ್ವರದಿ ಲಜ್ಜೆಯಿಲ್ಲದಂತೆ ।
ಸರಸಿಯಲ್ಲಿ ಬಂದು ನಿಂತು ।
ಮರುಳನಂತೆ ಕಮಲಿನಿಯಳ ।
ಸರಸ ಮುಖಕೆ ಮುದ್ದಿಸುವುದು ॥ ೧ ॥

**ವೀರಸೇನ:**—ಮಿತ್ರಾ! ಏನೇ ಇರಲಿ. ಸೂರ್ಯನ ಪ್ರಖರಕಿರಣಗಳಿಂದಾಗುವ ತಾಪವನ್ನು ಲಕ್ಷ್ಯಕ್ಕೆ ತಾರದಲೆ ಕುಲುಕುಲು ನಗುತ್ತ ಅವನ ಮುಖವನ್ನು ನೋಡುವ ಕಮಲಿನಿಯಿಂದ ಈ ಸರೋವರಕ್ಕೆ ಹೆಚ್ಚು ಸೌಂದರ್ಯವು ಪ್ರಾಪ್ತವಾಗಿದೆ. ಬಹು ಕೋಮಲಳಾದ ಕಮಲಿನಿಗೆ ಬಿಸಲಿನ ತಾಪವಾಗುವದಿಲ್ಲವೇನು?

**ಹಂಸರಾಜ:**—ಇಲ್ಲ.

**ವೀರಸೇನ:**—ಅದೇಕೆ?

**ಹಂಸರಾಜ:**—ಕಮಲಿನಿಯು ಮಹಾ ಪತಿವ್ರತೆಯು. ಈ ಜಗತ್ತಿನಲ್ಲಿ ವಾಸಿಸುವ ಜನರ ಸ್ಪರ್ಶವು ತನಗಾಗ ಬಾರದೆಂದೂ ತನ್ನ ಪ್ರಿಯಕಾಂತನ ಮುಖವನ್ನು ನೋಡುವ ಸಂಧಿಯು ತನಗೆ ಯಾವಾಗಲೂ ದೊರೆಯಬೇಕೆಂದೂ ಸರೋವರದ ನೀರಿನಲ್ಲಿ ತಪಸ್ವಿನಿಯಂತೆ ಬಂದು ನಿಂತಿದ್ದಾಳೆ. ವರುಣನು ಪತಿಸೇವಾನಿಷ್ಠಳಾದ ಕಮಲಿನಿಗೆ ತಾಪವಾಗಬಾರದೆಂದು ತನ್ನ ಮಂದಿರದಲ್ಲಿ ಸ್ಥಳವನ್ನು ಕೊಟ್ಟಿದ್ದಾನೆ. ಮಿತ್ರಾ! ಸತಿಗೆ ಪತಿಯ ಮುಖವನ್ನು ನೋಡಿದರೆ, ಎಂದಾದರೂ ದುಃಖವಾಗುವುದೇನು? ನೀನೇ ಹೇಳು.

**ವೀರಸೇನ:**—ಮಿತ್ರಾ! ನಿನ್ನ ಪ್ರತಿಯೊಂದು ಮಾತಿನಲ್ಲಿ ನಿನ್ನ ವಿರಹದ ಮನೋಭಾವವೇ ಕಂಡುಬರುತ್ತದಲ್ಲ. ನಾನಂತೂ ನಿನ್ನ ಸಂಬಂಧಿಕರ ಹೆಸರನ್ನು ತೆಗೆದು ಕೆಟ್ಟೆನು.

**ಹಂಸರಾಜ:**— ಕಮಲಿನಿಯ ನಿಜಸ್ಥಿತಿಯನ್ನು ಹೇಳಿದರೂ ಸಹ ನನ್ನಲ್ಲಿ ದೋಷವೆಣಿಸುವಿಯಲ್ಲ!! ಒಳ್ಳೇದು. ನನಗೂ ಅವರಿಗೂ ಇರುವ ಸಂಬಂಧವಾದರೂ ಏನು?

**ವೀರಸೇನ:**— ಸೂರ್ಯನಂತೂ ನಿನ್ನ ಕುಲದ ಆದಿಪುರುಷನು. ಅವನ ಮೇಲೆ ನಿನ್ನ ಪ್ರೇಮವಿರುವುದು ಸಹಜವೇ. (ನಗುತ್ತ) ಈ ಕಮಲಿನಿಯಳ ಮುಖವು ನಿನ್ನ ಪ್ರಿಯಳ ಮುಖವನ್ನು ಹೋಲುವುದು. ಆದ್ದರಿಂದ ನೀನು ಅವರ ವಿಷಯವಾಗಿ ಅಭಿಮಾನವನ್ನು ತೋರಿಸುತ್ತಿ.

**ಹಂಸರಾಜ:**— ಮಿತ್ರಾ! ನಿನಗೆ ಇಂಥ ಕಲ್ಪನಾಚಾತುರ್ಯವು ಎಂದು ಪ್ರಾಪ್ತವಾಯಿತು?

**ವೀರಸೇನ:**— ಶ್ರೀ ಶಾರದಾದೇವಿಯ ಪ್ರಿಯಭಕ್ತನಾದ ನಿನ್ನ ಸಹವಾಸದಿಂದ.

**ಹಂಸರಾಜ:**— ನನ್ನನ್ನು ಹೊಗಳುವ ಕಾರಣವಿಲ್ಲ. ನೀನಾದರೂ ಜಾಣನೇ ಇರುವಿ. ಒಳ್ಳೇದು; ಹೊತ್ತು ಮೀರಿತು; ಮಾತೆಯ ಆಶೀರ್ವಾದವನ್ನು ಸ್ವೀಕರಿಸುವುದಕ್ಕೆ ಅವಳೆಡೆಗೆ ಹೋಗುವ ನಡೆ.

**ವೀರಸೇನ:**— ಆಗ ಬಹುದು. (ಎಂದು ಇಬ್ಬರೂ ಹೋಗಹತ್ತುವಷ್ಟರಲ್ಲಿ ಕೋಕಿಲೆಯು ಎದುರಿಗೆ ಬಂದು ತಲೆ ಬಗ್ಗಿಸಿ ನಮಸ್ಕಾರಮಾಡಿ) ಮಹಾಪ್ರಭುಗಳಿಗೆ ಶುಭವಾಗಲಿ, ಶುಭವಾಗಲಿ. (ಎಂದು ವಿನಯದಿಂದ ಸರಿದು ನಿಲ್ಲುವಳು.)

**ಹಂಸರಾಜ:**— ಓಹೋ!! ಕೋಕಿಲೆಯೇನು? ಕೋಕಿಲೇ! ಯಾವಾಗ ಬಂದೆ? ನನ್ನ ಪ್ರಿಯಳು ಕ್ಷೇಮದಿಂದ ಇರುವಳೇ?

**ಕೋಕಿಲೆ:**— ತಮ್ಮನ್ನು ನೋಡಿದಂದಿನಿಂದ ಅವಳು ಕೃಶವಾಗುತ್ತ ನಡೆದಿರುವಳು. ಯಾವಾಗಲೂ ಅವಳಿಗೆ ತಮ್ಮ ಧ್ಯಾನವೇ ಧ್ಯಾನವು. ಊಟವನ್ನು ಸಹ ನೆಟ್ಟಗೆ ಮಾಡಲೊಲ್ಲಳು. ಏನು ಹೇಳಲಿ! ನಮ್ಮೊಡನೆಯೂ ಸಹ ನೆಟ್ಟಗೆ ಮಾತಾಡದೆ ಯಾವಾಗಲೂ ನಿಟ್ಟುಸುರು ಬಿಡುತ್ತ ಕುಳಿತಿರುವಳು. ಪ್ರಭುಗಳೇ! ತಮ್ಮ ದರ್ಶನದ ಹೊರತು ಅವಳಿಗೆ ಬೇರೆ ಯಾವ ಸಮಾಧಾನವೇ ಇಲ್ಲ.

**ಹಂಸರಾಜ:**— ಅವಳಿಗೆ ಸಮಾಧಾನವನ್ನು ಹೇಳುವವರು ಅಲ್ಲಿ ಒಬ್ಬರೂ ಇಲ್ಲವೇನು?

**ಕೋಕಿಲೆ:**— ಅವಳ ಹಿತವನ್ನು ಬಯಸುವ ತಂದೆಯೇ ಅವಳಿಗೆ ಪ್ರತಿಕೂಲನಾದ ಮೇಲೆ ಆ ನನ್ನ ಸಖಿಯ ಮನಸ್ಸಿಗೆ ಸಮಾಧಾನವೆನಿಸುವ ಬಗೆಯಾದರೂ ಹೇಗೆ?

**ಹಂಸರಾಜ:**— ಚಂದ್ರಶೇಖರನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಕಮಲೆಯ ಮೇಲೂ ಇಷ್ಟೇಕೆ ನಿರ್ದಯನಾಗಿರುವನು?

**ವೀರಸೇನ:**— ಮಿತ್ರಾ! ನಿನಗೆ ಆ ಕಾರಣವು ಗೊತ್ತಿದ್ದು ತಿರಿಗಿ ತಿರಿಗಿ ಏಕೆ ಕೇಳುವೆ? ನಾವಾದರೂ ನಿನ್ನ ಪ್ರಿಯಳನ್ನು ಕಾಡುವ ದುಷ್ಟನ ಪಾರುಪತ್ಯವನ್ನು ಮಾಡುವುದಕ್ಕೆ ಚಂಪಕನಗರಕ್ಕೆ ಹೊರಟಿರುವೆವಲ್ಲ. ಸುಮ್ಮನೆ ವೇಳೆಯನ್ನು ಕಳೆಯುವುದೇಕೆ?

**ಹಂಸರಾಜ:**— ನಿನಗೆ ಅನುರಾಗವೆಂಬುದೇನೂ ಗೊತ್ತಿಲ್ಲ. ಪ್ರಿಯಳ ಸವಿನುಡಿಯ ಸ್ವಾದವನ್ನು ಎಷ್ಟು ಸಾರೆ ರುಚಿಸಿದರೂ ತೃಪ್ತಿಯುಂಟೆ? ನಮ್ಮಗಳ ಹಿತಕ್ಕಾಗಿ ಇಲ್ಲಿಯವರೆಗೆ ಬಹು ಶ್ರಮಬಟ್ಟು ನಡೆದು ಬಂದು ಈ ಕೋಕಿಲೆಯ ಅಭಿಪ್ರಾಯವನ್ನು ಸಹ ನಾನು ತಿಳಿದುಕೊಳ್ಳಬೇಡವೇನು?

**ವೀರಸೇನ:**— ಕೇಳು. ನಾನೇಕೆ ಬೇಡವೆನ್ನಲಿ?

**ಹಂಸರಾಜ:**— ಕೋಕಿಲೇ! ವಿಶೇಷವೇನಾದರೂ ಇದ್ದರೆ ಹೇಳು.

**ಕೋಕಿಲೆ:**— ವಿಶೇಷವೇನಿದೆ? ನನ್ನ ಪ್ರಿಯಸಖಿಯು ಸ್ವಹಸ್ತದಿಂದ ಒಂದು ಪತ್ರವನ್ನು ಬರೆದು ಅದರೊಡನೆ ರತ್ನಖಚಿತವಾದ ಒಂದು ಉಂಗುರವನ್ನು ನನ್ನ ಕಡೆಗೆ ಕೊಟ್ಟಿರುತ್ತಾಳೆ.

**ಹಂಸರಾಜ:**— (ಆದರದಿಂದ) ಇಲ್ಲಿ ತಾ. ಅವೆಲ್ಲಿವೆ? ನೋಡುವಾ.

**ಕೋಕಿಲೆ:**— ಇಗೋ! ಸ್ವೀಕರಿಸಿರಿ. (ಎಂದು ಉಂಗುರವನ್ನೂ ಪತ್ರವನ್ನೂ ಹಂಸರಾಜನ ಕೈಯಲ್ಲಿ ಕೊಟ್ಟು) ಇವೇ ಅವಳ ಅಭಿಪ್ರಾಯಗಳು. (ಎಂದು ವಿನಯದಿಂದ ಹಿಂದಕ್ಕೆ ಸರಿದುನಿಲ್ಲುವಳು.)

**ಹಂಸರಾಜ:**— ನನ್ನ ಪ್ರಿಯಳು ಪ್ರೇಮದಿಂದ ಕಳುಹಿಸಿದ ಉಂಗುರ

ಗ್ರಂಥಾಲಯ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ



ವನ್ನು ಬಹು ಎಚ್ಚರದಿಂದ ಕಾಪಾಡುವೆನು. (ಅದನ್ನು ಕಣ್ಣಿಗೆ ಎದೆಗೆ ಹಚ್ಚಿಕೊಂಡು ಪತ್ರವನ್ನು ಓದಿ ನಂತರ) ಮಿತ್ರಾ! ಪತ್ರವನ್ನು ಓದುತ್ತೇನೆ ಕೇಳು. (ಎಂದು ಪತ್ರವನ್ನು ಓದಹತ್ತುವನು.) "ಎನ್ನ ಪ್ರಿಯ ಮಾನಸಹಂಸರೇ! ತಮ್ಮ ಪಾದಕಮಲದಲ್ಲಿಯ ರಜವನ್ನು ವಾಸಿಸಿ ಶಿರದಲ್ಲಿ ಧಾರಣಮಾಡುವ ಈ ದೀನದಾಸಿಯ ಉದ್ಧಾರಮಾಡುವುದು ತಮ್ಮನ್ನು ಕೂಡಿದೆ." ವೀರಸೇನಾ! ನನ್ನ ಪ್ರಿಯಳ ಬರವಣಿಗೆಯು ಎಷ್ಟು ಪ್ರೌಢವಾಗಿರುವುದು ನೋಡು. ಈ ಪದ್ಯದಲ್ಲಿಯ ಅಭಿಪ್ರಾಯವು ಬಹು ಮನೋಹರವಾಗಿದೆ.

**ವಿರಸೇನ:**— ಮಿತ್ರಾ! ಅದರಲ್ಲಿಯ ಅಭಿಪ್ರಾಯವು ನನಗೆ ತಿಳಿಸಲು ಬರುವ ಹಾಗಿದ್ದರೆ ತಿಳಿಸು. ಪತಿ ಪತ್ನಿಯರ ರಹಸ್ಯದಲ್ಲಿಯ ತತ್ವವನ್ನು ತಿಳಿದುಕೊಳ್ಳುವುದು ಯುಕ್ತವಲ್ಲ.

**ಹಂಸರಾಜ:**— ಇದರಲ್ಲಿ ಅಂಥ ರಹಸ್ಯವೇನೂ ಇಲ್ಲ. ಈ ಪದ್ಯವು ಅವಳ ದೀನಾವಸ್ಥೆಯನ್ನು ನಮಗೆ ತಿಳಿಸುವುದು.

**೩೭ನೆ ಪದ.** ರಾಗ:— (ಮಾಲಕಂಸ ಆದಿತಾಳ.)

ಮುದ ಬೀರು ಬೀರು ಕಡುಜವದಿ ನೀನು ।
ಮುದ್ದುಮುಖವ ನೋಡಿ ಸುಖ ಬಡುವೆ ನಾನು ॥ ಪ ॥
ಮನದೊಳು ತವ ಮೂರ್ತಿಯನ್ನು ಬಿಡದಾಗಿ ।
ಮೌನದಿ ಪೂಜಿಸುತಿರಲಾಗಿ ।
ಗುಣಿ ನಾನು ಸೆರೆಯಾದೆ ಹೀಗೆ ॥ ೧ ॥

"ಮನಸ್ಸಿನಿಂದ ನಿಮ್ಮನ್ನು ಒರಿಸಿ ನಿಮ್ಮನ್ನೇ ನಂಬಿದ ಈ ದೀನ ದಾಸಳ ಬಂಧಮುಕ್ತತೆಯನ್ನು ಮಾಡಿರಿ. ನೀವು ಬಾರದಿದ್ದರೆ ನಾನು ಕಠಾರಿಯನ್ನು ಎದೆಗೆ ಇರಿದುಕೊಂಡು ಸಾಯುತ್ತೇನೆ. ಆ ದುಷ್ಟನಾದ ಕುಮತಿಯನ್ನು ಲಗ್ನವಾಗುವುದಿಲ್ಲ. ಇದೇ ನನ್ನ ನಿಶ್ಚಯವು." (ನಗುತ್ತ) ಅಹಾಹಾ!! ಏನು ಪ್ರೇಮವಿದು!! ಗೆಳೆಯನೇ! ಇದರ ಮೇಲಿಂದ ಅವಳೆಷ್ಟು ಸುಶಿಕ್ಷಿತಳಾಗಿರಬೇಕು. ನೀನೇ ತಿಳಿದು ನೋಡು. ಅವಳ ವಿನಯವು ಬಹು ಮನೋಹರವಾಗಿದೆ. ರೂಪಕ್ಕೆ ತಕ್ಕ ವಿನಯಾದಿಗಳು ಸ್ತ್ರೀಯರಲ್ಲಿದ್ದರೆ ಅವರು ಲೋಕಪೂಜ್ಯರು. ಅಂಥ

ಸ್ತ್ರೀರತ್ನವನ್ನು ಪಡೆಯುವವನೇ ಧನ್ಯನು. ಮಿತ್ರಾ! ಎಷ್ಟು ನಿರ್ಬಂಧದಲ್ಲಿದ್ದರೂ ತನ್ನ ಪಾತಿವ್ರತ್ಯವನ್ನು ಕಾಯ್ದುಕೊಳ್ಳಲು ಯತ್ನಿಸುವ ಆ ಮನಮೋಹಿನಿಯು ನನ್ನ ಕೃಪಾಕಟಾಕ್ಷಕ್ಕೆ ಪಾತ್ರಳಲ್ಲವೇನು? ಇಂಥ ರತ್ನವನ್ನು ಜರೆಯುವುದು ನ್ಯಾಯವೆ?

**ವೀರಸೇನ:**— ಅವಳ ಮಹಿಮೆಯು ಈಗ ನನಗೆ ಗೊತ್ತಾಯಿತು. ಅವಳನ್ನು ನಿಂದಿಸಿದ್ದಕ್ಕಾಗಿ ನನಗೆ ಬಹು ಪಶ್ಚಾತ್ತಾಪವಾಗಹತ್ತಿದೆ.

**ಕೋಕಿಲೆಯು:**— ಪ್ರಭುಗಳೇ! ಚಂಪಕನಗರಕ್ಕೆ ಜಾಗ್ರತೆಯಾಗಿ ಹೊರಡುವ ಆಲೋಚನೆಯನ್ನು ಮಾಡಿರಿ. ನಾನು ಆದಷ್ಟು ತೀವ್ರ ಅಲ್ಲಿಗೆ ಹೋಗಬೇಕಾಗಿದೆ.

**ಹಂಸರಾಜ:**— ಕೋಕಿಲೇ! ಚಿಂತಿಸಬೇಡ. ಇಂದೇ ಬರುತ್ತೇನೆಂದು ನಿನ್ನ ಸಖಿಗೆ ತಿಳಿಸಲು ಅತ್ತಕಡೆಗೆ ಹೋಗು. ತಡಮಾಡಬೇಡ. ನೀನು ಇಲ್ಲಿಯೇ ಉಳಿದರೆ ಅವಳು ತನ್ನ ಜೀವಕ್ಕೆ ಅಪಾಯವನ್ನು ಮಾಡಿಕೊಂಡಾಳು.

**ಕೋಕಿಲೆ:**— ತಮ್ಮ ಗುಣಕ್ಕೆ ಹಾಗೂ ಧೈರ್ಯಕ್ಕೆ ಲುಬ್ಧಳಾದ ಅವಳು ತಮ್ಮ ಮುಖವನ್ನು ನೋಡದೆ ಬಾಯಿಯಲ್ಲಿ ನೀರನ್ನು ಸಹ ಹಾಕಲಿಕ್ಕಿಲ್ಲವೆಂದು ಪಣವನ್ನು ಮಾಡಿದ್ದಾಳೆ. ನಾನು ಒಬ್ಬಳೇ ಅಲ್ಲಿಗೆ ಹೋಗುವಂತೆ ಇಲ್ಲ. ತಾವೂ ನನ್ನ ಸಂಗಡ ಬನ್ನಿರಿ.

**ಹಂಸರಾಜ:**— ಮಿತ್ರನೇ! ನನ್ನ ಪ್ರಿಯಳ ಪ್ರೇಮವು ನನ್ನ ಮೇಲೆ ಎಷ್ಟು ಆದೆ ನೋಡಿದೆಯಾ?

**ವೀರಸೇನ:**— ನೀನು ಗುಣಿಯು; ನಿನ್ನ ಮೇಲೆ ಅವಳ ಪ್ರೇಮವಿರುವುದೇನಾಶ್ಚರ್ಯವು?

**ಹಂಸರಾಜ:**— ಅದಿರಲಿ, ಕೋಕಿಲೇ! ನೀನು ಇಲ್ಲಿಯೇ ಮಾರ್ಗ ನಿರೀಕ್ಷಣೆ ಮಾಡುತ್ತ ಕುಳಿತಿರು. ನಾನು ತಾಯಿಯ ದರ್ಶನವನ್ನು ತೆಗೆದುಕೊಂಡು ಬರುವೆನು.

**ಕೋಕಿಲೆ:**— ಅಪ್ಪಣೆ. (ಎಂದು ಸುಮ್ಮಗಾಗುವಳು. ಹೊರಟು ಹೋಗುವರು.)



# ೩ನೆಯ ಪ್ರವೇಶವು.



## ಸ್ಥಳ:— ಸುಶೀಲಾದೇವಿಯ ಮಂದಿರವು.

ಪಾತ್ರಗಳು:— **ಹಂಸರಾಜ, ವೀರಸೇನ, ವಿಜಯ, ಸುಶೀಲಾದೇವಿ ಮತ್ತು ಇಬ್ಬರು ದಾಸಿಯರು.**

ಬರುವ ರೀತಿ:—(ಸುಶೀಲಾ ಮಹಾರಾಣಿಯು ಆಸನದ ಮೇಲೆ ಕುಳಿತಿರುವಳು. ದಾಸಿಯರು ಎರಡೂ ಬದಿಯಲ್ಲಿ ನಿಂತು ಗಾಳಿಯನ್ನು ಹಾಕುವರು. ವಿಜಯಕುಮಾರನು ತನ್ನ ಖಡ್ಗದೊಡನೆ ಆಸನದ ಹತ್ತಿರ ಕುಳಿತಿರುವನು.)

**ಸುಶೀಲೆ:**— ವಿಜಯಾ! ನಿನ್ನೆ ರಾಜಸಭೆಯಲ್ಲಿ ಯಾವ ಮಹತ್ವದ ಸಂಗತಿಯು ವರ್ತಿಸಿಯದೆ?

**ವಿಜಯ:**— ನಮ್ಮ ಮಹಾರಾಜರು ಪಾಟಲಪುರದ ರಾಜನ ಮೇಲೆ ದಂಡೆತ್ತಿ ಹೋಗುವ ವಿಚಾರದಲ್ಲಿದ್ದರು. ಅವರೊಡನೆ ನನ್ನ ಅಣ್ಣನಾದ ವೀರಸೇನನು ಹೊರಡುವನು.

**ಸುಶೀಲೆ:**— ಒಳ್ಳೇದು, ಅಲ್ಲಿಗೆ ಹೋಗುವುದಕ್ಕೆ ಅಂಥ ಕಾರಣವಾದರೂ ಏನು?

**ವಿಜಯ:**— ಪಾಟಲಪುರದ ರಾಜನು ತಾನು ಕಳಿಸತಕ್ಕ ಕಾಣಿಕೆಯನ್ನು ಈ ವರೆಗೂ ಕಳಿಸಿಕೊಟ್ಟಿಲ್ಲವಂತೆ.

**ಸುಶೀಲೆ:**— ಮೊನ್ನೆ ಮೊನ್ನೆಯಾದ ಕಾಳಗದಲ್ಲಿ ಹಂಸರಾಜನಿಗೆ ಸೋತು, ಆತನಿಗೆ ಜಯಪತ್ರವನ್ನು ಬರಕೊಟ್ಟ ನೀಚನು ಇಷ್ಟು ಅವಧಿಯಲ್ಲಿಯೇ ಎಷ್ಟು ಮದಾಂಧನಾಗಿರುವನಲ್ಲ!! ಹಂಸನು ಬರಲಿ ಎಂದರೆ ನಾನು ಆ ನೀಚನ ಸೊಕ್ಕು ತಗ್ಗಿಸುವುದಕ್ಕೆ ಅವನಿಗೆ ಹೇಳುವೆನು.

**ವಿಜಯ:**— ದೇವಿಯವರೇ! ಈ ಸಾರೆ ನಾನೂ ಅವನ ಪಾರುಪತ್ಯವನ್ನು ಚನ್ನಾಗಿ ಮಾಡುವುದಕ್ಕೆ ಹಂಸರಾಜನೊಡನೆ ಯುದ್ಧಕ್ಕೆ ಹೋಗುವ ನಿಶ್ಚಯವನ್ನು ಮಾಡಿದ್ದೇನೆ.

**ಸುಶೀಲೆ:**— ಸುಕುಮಾರಾ! ನೀನು ಇನ್ನೂ ಚಿಕ್ಕವನು. ಯುದ್ಧದಲ್ಲಿ ವೈರಿಗಳೊಡನೆ ಹೋರಾಡುವುದು ನಿನ್ನಿಂದಾಗದು.

**ವಿಜಯ:**— ನಾನು ಹುಟ್ಟಿದ್ದು ಏತಕ್ಕೆ? ಗುಣಿಯಾದ ಹಂಸರಾಜರ ಮನಸ್ಸಿಗೆ ತಾಪವನ್ನು ಕೊಡುವ ಅಧಮರ ನಾಶವನ್ನು ಮಾಡುವುದಕ್ಕೆ ಅಲ್ಲವೇ? ದೇವಿಯವರೇ! ತಮ್ಮ ಪ್ರಿಯ ದಾಸಿಯಾದ ಮಧುರೆಗೆ ನಾನು ಚಂಪಾರಣ್ಯದಲ್ಲಿ ತೋರಿಸಿದ ಬಾಹು ಸಾಮರ್ಥ್ಯವು ಗೊತ್ತಿದೆ ಕೇಳಿರಿ.

**ಸುಶೀಲೆ:**— ಮಧುರೇ! ಏನದು ಹೇಳು.

**ಮಧುರೆ:**— ನಾನು ಆ ಅರಣ್ಯದ ಶೋಭೆಯನ್ನು ನೋಡುತ್ತಿರುವಾಗ ಒಂದು ಭಯಂಕರವಾದ ಹುಲಿಯು ಆರ್ಭಟಿಸುತ್ತ ನನ್ನ ಮೇಲೆಯೇ ಬಂತು. ಅವ್ವಯ್ಯಾ!! ಆಗ ಆದ ನನ್ನ ಅವಸ್ಥೆಯನ್ನೇನು ಹೇಳಲಿ? (ಎಂದು ಗದಗದ ನಡುಗುತ್ತ ನಿಲ್ಲುವಳು.)

**ಸುಶೀಲೆ:**— ಹೀಗೇಕೆ ನಡುಗುವಿ? ಈಗ ನೀನು ಮಂದಿರದಲ್ಲಿ ಇರುತ್ತಿ; ಅರಣ್ಯದಲ್ಲಿಲ್ಲ. ಏನಾಯಿತು ಹೇಳು.

**ಮಧುರೆ:**— ದೇವಿಯವರೇ! ನಾನು ಬಹು ಅಂಜುಬುರುಕಳು. ಅಲ್ಲಿ ವರ್ತಿಸಿದ ಸಂಗತಿಯು ನನ್ನ ನೆನಪಿಗೆ ಬಂತೆಂದರಾಯಿತು. ನನಗೆ ಯಾವುದೂ ತೋಚದಂತೆಯಾಗಿ, ಭಯವು ಬರುತ್ತಿದೆ. ಆ ದಿವಸ ಈ ಬಾಲಕನು ತನ್ನ ಬಾಣವನ್ನು ಹುಲಿಯ ಮೇಲೆ ಬಿಟ್ಟು, ಅದಕ್ಕೆ ಘಾಯವನ್ನು ಮಾಡದಿದ್ದರೆ ನಾನು ತಮ್ಮ ಪೂಜ್ಯವಾದ ಪಾದಕಮಲಗಳನ್ನೇ ಕಾಣುತ್ತಿದ್ದಿಲ್ಲ. ದೇವಿಯವರೇ! ಮಾನದ ಮರಿಗೆ ಯಾರಾದರು ಈಸಲಿಕ್ಕೆ ಕಲಿಸುವರೇನು?

**ಸುಶೀಲೆ:**— ಹೀಗೇನು!! ಮಧುರೇ! ಈ ಸಂಗತಿಯನ್ನು ಕಂಡ ಕಂಡವರ ಮುಂದೆ ಹೇಳಬೇಡ. ಈ ನನ್ನ ಮುದ್ದು ಬಾಲನಿಗೆ ದೃಷ್ಟಿಯಾದೀತು. ಇನ್ನು ಮೇಲೆ ಇವನನ್ನು ಅಂಥ ಸ್ಥಳಕ್ಕೆ ಕರೆದುಕೊಂಡು ಹೋಗಬೇಡ. ವಿಜಯಾ! ನೀನು ಈ ಸಂಗತಿಯನ್ನು ಮೊದಲು ನನಗೇಕೆ ತಿಳಿಸಲಿಲ್ಲ?

**ವಿಜಯ:**— ಪಶುವನ್ನು ಕೊಲ್ಲದೆ ಸಜ್ಜನರನ್ನು ಕಾಡುವ ದುಷ್ಟನಾದ ರಾಜನನ್ನು ಕೊಂದಿದ್ದರೆ ಹೇಳುತ್ತಿದ್ದೆನು. ಪಶುವನ್ನು ಕೊಂದೆನೆಂದು ತಿಳಿಸುವುದಕ್ಕೆ ನನಗೆ ನಾಚಿಕೆಯು ಬಂತು.

**ಸುಶೀಲೆ:**—ಬಾಲಕಾ! ಹುಲಿಯನ್ನು ಓಡಿಸಿದ್ದು, ಸಾಮಾನ್ಯಕಾರ್ಯ ವಲ್ಲ. ಧೀರರು ಸಹ ಹುಲಿಗೆ ಹೆದರಿ ಹಿಂಜರಿಯುವರು. ಇನ್ನು ಮೇಲೆ ಮಾತ್ರ ನೀನು ಒಬ್ಬನೇ ಅರಣ್ಯದ ಕಡೆಗೆ ಹೋಗಬೇಡ.

**ವಿಜಯ:**—(ಮುಗುಳು ನಗೆ ನಗುತ್ತ) ಹೀಗೆ ಹೆದರಿದರೆ ಹೇಗೆ? ದೇವಿಯವರೇ! ಕ್ಷತ್ರಿಯರು ಮರಣದ ಭಯವನ್ನು ಮನಸ್ಸಿನಲ್ಲಿ ಸಹ ತರ ಬಾರದೆಂದು ನೀವು ಹೇಳಿದ್ದು ನನ್ನ ಧ್ಯಾನದಲ್ಲಿದೆ.

**ಮಧುರೆ:**—ದೇವಿಯವರೇ! ವಿಜಯನು ವೈರಿಗಳ ಬಲವನ್ನು ತಗ್ಗಿ ಸುವ ಕುರಿತು, ಒಂದು ಪದವನ್ನು ಹಾಡುತ್ತಾನೆ. ಪದ್ಯವು ಕೇಳಲು ಬಹು ರಮ್ಯವಾಗಿದೆ.

**ಸುಶೀಲೆ:**—ಸುಕುಮಾರಾ! ಆ ಪದ್ಯವನ್ನು ಎನ್ನು, ಕೇಳುವಾ.

**ವಿಜಯ:**—ಆಗಬಹುದು. (ಎಂದು ತನ್ನ ಒರೆಯೊಳಗಿನ ಖಡ್ಗವನ್ನು ತೆಗೆದು ಬಹು ಆವೇಶದಿಂದ ಹಾವಭಾವಗಳನ್ನು ಮಾಡುತ್ತ)

**೩೮ ಪದ.** ಧಾಟಿ:—**(मम चित्त सरोज निवासि)**

ರಣದಲ್ಲಿ ಮಹಾಬಲ ತೋರಿ ।
ಗುಣಿಯನ್ನು ಪಾಲಿಪೆನಾತೆ ॥ ಪ ॥
ಅಧಮರದಂಡಿಸಿ ಶಿರಗಳ ಖಂಡಿಸಿ ಮಮಾತ್ಮರಂಜಿಸಿ ।
ಸದೋದಿತಹರುಷ ಬಡುವೆನೆರಣದಿ ವಿಶಾಲಾಕ್ಷಿಯೆ ತಿಳಿ ॥ ೧ ॥

**ಮಧುರೆ:**—ದೇವಿಯವರೇ! ಪದ್ಯವು ಹೇಗಿದೆ?

**ಸುಶೀಲೆ:**—ಕೇಳುವುದೇನು? ಇವನು ಯಾರ ಮಗನು?

**ಮಧುರೆ:**—ಭದ್ರಸೇನ ಮಹಾರಾಜರ ಮಗನು.

**ಸುಶೀಲೆ:**—ಸಿಂಹನ ಹೊಟ್ಟೆಯಲ್ಲಿ ಸಿಂಹವು ಹುಟ್ಟದೆ ನರಿಯು ಎಂದಿ ಗಾದರು ಹುಟ್ಟೀತೇ?

**ಕಂಚುಕಿ:**—(ಬಂದು) ಪ್ರಭುಗಳು ವೀರಸೇನ ಮಹಾರಾಜರೊಡನೆ ದ್ವಾರದಲ್ಲಿ ಬಂದು ನಿಂತು, ಒಳಗೆ ಬರಲು ತಮ್ಮ ಅಪ್ಪಣೆಯನ್ನು ಕೇಳುತ್ತಾರೆ.

**ಸುಶೀಲೆ:**—ಅವರಿಬ್ಬರನ್ನು ಒಳಗೆ ಕರೆದುಕೊಂಡು ಬಾ, ಹೋಗು.

**ಕಂಚುಕಿ:**-- ಅಪ್ಪಣೆ. (ಎಂದು ಹೋಗುವಳು.)

**ಹಂಸರಾಜ:**— ಮಾತೇ! ನಮಸ್ಕರಿಸುವೆನು.

**ಸುಶೀಲೆ:**— ದೀರ್ಘಾಯುವಾಗು. (ಎಂದು ಎನ್ನುವಳು.)

**ವೀರಸೇನ:**— ದೇವಿ! ನಮಸ್ಕರಿಸುವೆನು.

**ಸುಶೀಲೆ:**— ವಿಜಯಶೀಲನಾಗು. (ಎನ್ನುವಳು.) ವೀರಸೇನಾ! ನೀನು ನಿನ್ನ ತಮ್ಮನ ಹತ್ತಿರ ಕುಳಿತುಕೊ. ಹಂಸಾ! ನೀನು ಈ ಆಸನದ ಮೇಲೆ ಕುಳಿತುಕೊ.

**ಹಂಸರಾಜ:**—
**ವೀರಸೇನ:**— } ಆಗಲಿ (ಎಂದು ಇಬ್ಬರೂ ಕುಳಿತುಕೊಳ್ಳುವರು.)

**ಸುಶೀಲೆ:**— ಇದೇನು ಈಗ ಬಂದಿರಿ?

**ಹಂಸರಾಜ:**— ಒಂದು ಮಹತ್ವದ ಕಾರಣಕ್ಕಾಗಿ ಚಂಪಕನಗರಕ್ಕೆ ಹೋಗಬೇಕಾಗಿದೆ.

**ಸುಶೀಲೆ:**— ಅದಾವ ಕಾರಣವು?

**ವೀರಸೇನ:**— ದೇವಿಯವರೇ! ಆ ಕಾರಣವನ್ನು ನಾನು ಹೇಳುತ್ತೇನೆ. ಚಂದ್ರಶೇಖರನ ಪ್ರಿಯ ಪುತ್ರಿಯೂ ಗುಣಿಯೂ ಆದ ಕಮಲೆಯು ಹಂಸ ರಾಜನ ಪ್ರಿಯ ಪತ್ನಿಯಾಗುವಳು. ಇಂದು ನಮಗೆ ಭಾಗ್ಯೋದಯ ಕಾಲವು ಪ್ರಾಪ್ತವಾಗಿದೆ ಎಂದು ತಿಳಿಯಿರಿ.

**ಸುಶೀಲೆ:**— (ಆಶ್ಚರ್ಯದಿಂದ) ಇದೇನು ಹೇಳುವೆ!! ವೀರಸೇನಾ! ನಮ್ಮ ಕಡುವೈರಿಯೂ ದುರಭಿಮಾನಿಯೂ ಆದ ಚಂದ್ರಶೇಖರನು ತನ್ನ ಮಗಳನ್ನು ಹಂಸನಿಗೆ ಕೊಡಲಿಕ್ಕೆ ಸಮ್ಮತಿಸಿದನೇ?

**ವೀರಸೇನ:**— ಅವನೆಲ್ಲಿ ಸಮ್ಮತಿಸಿರುವನು? ಆ ದುಷ್ಟನ ಪ್ರೇಮವೆಲ್ಲ ಧನಾಶೆಯಿಂದ ಕುಮತಿಯ ಮೇಲೆಯೇ! ಆದರೆ, ಗುಣಿಯಾದ ಕಮಲೆಯು ಹಂಸರಾಜನನ್ನೇ ವರಿಸುವೆನೆಂದು ಹಟತೊಟ್ಟದ್ದರಿಂದ ಚಂದ್ರಶೇಖರನು ಅವ ಳನ್ನು ದುರ್ಗದಲ್ಲಿ ಇಟ್ಟದ್ದು ನಿಮಗೆ ಗೊತ್ತಿದೆ. ಈಗ ನಾವು ಅವಳ ಬಂಧ ಮುಕ್ತತೆಯನ್ನು ಮಾಡಲು ಹೊರಟಿರುವೆವು.

**ಸುಶೀಲೆ:**— ಸುಶೀಲಳಾದ ಕಮಲೆಯು ನನ್ನ ಸೊಸೆಯಾದವಳೆಂದರೆ

ನನ್ನ ಭಾಗ್ಯಕ್ಕೆ ಎಣೆಯೇ? ವೀರಸೇನಾ! ಬಹು ಬಲಾಢ್ಯನಾದ ಚಂದ್ರಶೇಖರನ ಭದ್ರನಾದ ದುರ್ಗದಲ್ಲಿದ್ದ ಆ ಸುಕುಮಾರಿಯ ಬಿಡುಗಡೆಯನ್ನು ಮಾಡುವುದಾದರೂ ಹೇಗೆ?

**ವೀರಸೇನ:**— ವಿಚಾರವೇಕೆ? ತಮ್ಮ ಅನುಗ್ರಹ ಆಶೀರ್ವಾದವೊಂದಿರಲಿ, ಹೇಗಾದರೂ ಮಾಡಿ ನಾವು ಅವಳ ಬಿಡುಗಡೆಯನ್ನು ಮಾಡುವೆವು.

**ಸುಶೀಲೆ:**— ಅವಳು ಸುಲಭಸಾಧ್ಯಳಲ್ಲ. ಶತ್ರುವು ಪ್ರಬಲನಾಗಿರುವನು.

**ವೀರಸೇನ:**— ಕಂಟಕಗಳಿಗೆ ಎದುರಾಗದೆ ಉತ್ತಮ ಪದಾರ್ಥಗಳು ನಮಗೆ ಎಂದಿಗೂ ದೊರೆಯಲಾರವು. ದೇವಿಯವರೇ! ದೇವರು ಸುಂದರವಾದ ಗುಲಾಬಿಯನ್ನು ಕಂಟಕಗಳ ಮಧ್ಯದಲ್ಲಿ ಹುಟ್ಟಿಸಿರುವುದಿಲ್ಲೆ?

**ಹಂಸರಾಜ:**— ಮಾತೇ! ಇದೆಷ್ಟರ ಕೆಲಸ, ಈ ತಲೆಯ ಮೇಲೆ ನಿನ್ನ ವರದ ಹಸ್ತವನ್ನಿಡು.

**ಸುಶೀಲೆ:**— ಹಂಸಾ! ನೀನು ವೀರನಾದರೂ ಆ ದುಷ್ಟ ಚಂದ್ರಶೇಖರನ ಅಂತರಂಗವನ್ನು ತಿಳಿಯಲಾರಿ. ಅವನು ಮಹಾ ಕಪಟಿಯು. ನಮ್ಮ ಉತ್ಕರ್ಷವನ್ನು ನೋಡುವುದು ಅವನಿಗೆ ಬೇಡಾಗಿದೆ. ಬಲಿಷ್ಠನಾದವನೊಡನೆ ಕಾಲು ಕೆದರಿ ಜಗಳ ತೆಗೆದು ಹಸ್ತಿನಾವತಿಯ ಮೇಲೆ ಮಹತ್ತರವಾದ ಸಂಕಟವನ್ನು ತಂದುಕೊಳ್ಳುವುದೇನು ನೆಟ್ಟಗೆ, ನೀನೇ ಹೇಳು? ನಾನು ನನ್ನ ಈ ವೈಭವಕ್ಕೆ ಹಾನಿಯು ತಟ್ಟುವುದೆಂದು ಹೀಗೆ ಮಾತಾಡುವುದಿಲ್ಲ. ಬಾಲಕಾ! ಪ್ರಜೆಗಳು, "ಸುಶೀಲಾ ಮಹಾರಾಣಿಯು ಎಂಥವಳು. ತನ್ನ ರಾಜ್ಯದ ಹಿತದ ಕಡೆಗೆ ಸ್ವಲ್ಪ ಸಹ ಲಕ್ಷ ಕೊಡದೆ, ಒಬ್ಬ ಕಾಮಿನಿಯ ಹಿತಕ್ಕಾಗಿ, ತನ್ನ ಭಂಗಾರದಂತಿರುವ ಮುದ್ದುಮಗನನ್ನು ವೈರಿಯ ರಾಜ್ಯದೊಳಗೆ ಹೇಗೆ ಕಳಿಸಿದಳು? ಅವಳಿಗೆ ಬುದ್ಧಿಭ್ರಂಶವಾಗಿತ್ತೇನು" ಎಂದು ನನಗೆ ಹೆಸರನ್ನಿಡದೆ ಬಿಟ್ಟಾರೆ? ಹಂಸಾ! ಅಲ್ಲಿಗೆ ಹೋಗಬೇಡ. ನಾನು ತಿಳಿದು ತಿಳಿದು ಪ್ರಜೆಗಳನ್ನು ಸಂಕಟದಲ್ಲಿ ನೂಕಲಾರೆನು. ಪ್ರಿಯರಾದ ಪ್ರಜರ ದುಃಖವನ್ನು ನೋಡುವುದು ನನ್ನಿಂದಾಗದು. ದಯಮಾಡಿ ಅಲ್ಲಿಗೆ ಹೋಗಿ ಹಸ್ತಿನಾವತಿಯ ಮೇಲೆ ಸಂಕಟವನ್ನು ತರಬೇಡ. ಪ್ರಜರ ಅಹಿತವನ್ನು ಬಯಸಲಾರೆನು. (ಎಂದು ಕಣ್ಣೀರು ಹಾಕುವಳು.)

**ಹಂಸರಾಜ**:—(ವಿನಯದಿಂದ) ಮಾತೇ! ಅಳಬೇಡ, ಅಳಬೇಡ, ಕಣ್ಣುಗಳನ್ನೊರಿಸಿಕೊ, ಶಾಂತಳಾಗು. (ಎಂದು ವೀರಸೇನನನ್ನು ಕುರಿತು) ಮಿತ್ರಾ! ನಾನು ಚಿಕ್ಕವನಿರುವಾಗ ಭಂಗಾರಿ, ಶ್ರಂಗಾರಿ, ಮುಂಗೈಯ ಮೇಲಾಡುವ ಅರಗಿಳಿಯೆಂದು ನನಗೆ ಹೆಸರನ್ನಿಡುತ್ತ ಮುಖಕ್ಕೆ ಮುದ್ದು ಕೊಡುತ್ತ ಹೊತ್ತು ಹೊತ್ತಿಗೆ ಹೊಟ್ಟೆಗೆ ಹಾಕಿ ನನ್ನನ್ನು ಇಲ್ಲಿಯ ವರೆಗೆ ಹೂವಿನಂತೆ ಬಹು ಪರಿಪರಿಯಿಂದ ಪಾಲಿಸಿದ ತಾಯಿಯ ಹೃದಯವನ್ನು ನೋಯಿಸಿ ನಾನಂತೂ ಅಲ್ಲಿಗೆ ಬರಲಾರೆನು. ಈಗ ನಾನು ನನ್ನ ಮೊದಲಿನ ವಿಚಾರವನ್ನು ತಿರುಗಿಸಿರುತ್ತೇನೆ. ಹಡೆದ ತಾಯಿಗೆ ದುಃಖವನ್ನು ಕೊಟ್ಟು ನಾನು ಯಾವ ನರಕದ ಯಾತನೆಯನ್ನು ಭೋಗಿಸಲಿ. ಮಿತ್ರಾ! ದೇವರು ಈಗ ಇದ್ದ ನರಕದಕ್ಕಿಂತ ಹೆಚ್ಚು ಭಯಂಕರವಾದ ನರಕವನ್ನು ಮಾತ್ರ ದ್ರೋಹಿಗಳಿಗಾಗಿ ನಿರ್ಮಾಣ ಮಾಡಬೇಕಾಗುವುದು. ಹಾಗೂ ಮಾತೃದೇವಿಯು ಮಗನು ಕೊಡುವ ತಾಪದಿಂದಾದ ದುಃಖದಿಂದ ಸುರಿಸುವ ಶೋಕಬಿಂದುಗಳು ಕಣ್ಣುಗಳೊಳಗಿಂದ ಉದುರುವ ಹನಿಗಳಲ್ಲ ನಮ್ಮ ಕುಲವನ್ನೇ ನಾಶ ಮಾಡುವ ವಿಷಬಿಂದುಗಳೆಂದು ತಿಳಿ. ಮಿತ್ರಾ! ನೀನು ಓಲಗಕ್ಕೆ ನಡೆ. ಕೋಕಿಲೆಯು ತನ್ನ ಪಟ್ಟಣಕ್ಕೆ ಹೊರಟು ಹೋಗಲಿ. ನಾನು ಮಾತೆಯ ಕಲ್ಯಾಣಕ್ಕಾಗಿ ಮತ್ತು ದೇಶಕಲ್ಯಾಣಕ್ಕಾಗಿ ಹುಟ್ಟಿರುವೆನು. ನಾನು ಸ್ವತಂತ್ರನಲ್ಲ. ನನ್ನ ದೇಹದ ಮೇಲೆ ಇವಳ ಅಧಿಕಾರವಿದೆ. ಹೂ! ಮುಖವನ್ನು ನೋಡುತ್ತ ನಿಲ್ಲಬೇಡ. ನಾನು ಇವಳ ಸಮಾಧಾನವನ್ನು ಮಾಡಿ ಬರುವೆನು. (ಎಂದು ಸುಶೀಲಾದೇವಿಗೆ) ಮಾತೇ! ಇನ್ನಾದರೂ ನನ್ನೊಡನೆ ಮುಗುಳುನಗೆ ನಗುತ್ತ ಮಾತನಾಡು. ನಿನ್ನ ಮನಸ್ಸಿಗೆ ದುಃಖವಾಗ ಬಾರದೆಂದೇ ನಾನು ಅತ್ತಕಡೆಗೆ ಹೋಗುವ ವಿಚಾರವನ್ನು ಸಹ ಮನಸ್ಸಿನೊಳಗೆ ಬರಗೊಡುವುದಿಲ್ಲ. ಮಾತನಾಡು, ನಿನ್ನ ಬಾಡಿದ ಮುಖವನ್ನು ನೋಡಿದರೆ ನನ್ನ ಮನಸ್ಸಿಗೆ ಹೇಗೆ ಸಮಾಧಾನವಾದೀತು?

**೩೯ ಪದ.** ಧಾಟಿ:—(दे हाता या शरणागता)

ಹೇ ಮಾತೇ ನಾಶರಣಾಗತಾ || ಪ ||

ಮರಗುವರೆ ಮನವಿದುತಾ ಚಿಂತಿಸುತಾ

ಮರಗುವುದೇ ಸದಾ ನೀ ಮಾತೇ ॥ ೧ ॥
ಮನ್ನಿಸೇ ವಿರಿಸಿಕರುಣಾ ತೋರುತಾ
ನೀನು ಮೋದಾ । ಮುನಿವರೇ ಪದ್ಮನಯನೇ ॥ ೨ ॥
ಚರಣಕಮಲ ರಜವನೇ ಶಿರದಲಿ ನಾ ।
ಧರಿಸುವೆನೇ ಸದಾ ಹೇ ಮಾತೇ ॥ ೩ ॥

**ಸುಶೀಲೆ:**—ಬಾಲಕಾ! ಏಳು. ಹೀಗೇಕೆ ಮಾಡುವೆ? ನಾನು ಅಂಜುಬುರುಕಳಲ್ಲ, ಸಾವಿನ ಹೆದರಿಕೆಯು ನನಗಿಲ್ಲ. ಮಗುವೇ! ನಾನು ನಿನ್ನ ಮೇಲಿನ ವ್ಯಾಮೋಹಕ್ಕಾಗಿ ಇಷ್ಟು ಹಲುಬಲಿಲ್ಲ. ಪ್ರಜೆಗಳಿಗೆ ಅಹಿತವಾದೀತೆಂಬ ವಿಚಾರದಿಂದಲೇ ನನ್ನ ಕಣ್ಣುಗಳೊಳಗಿಂದ ಅಶ್ರುಬಿಂದುಗಳು ಉದರಿದವು. ಬಂಧನತಾಪದಿಂದ ಬಳಲುವ ಕಮಲೆಯ ಬಿಡುಗಡೆಯನ್ನು ಮಾಡಲು ಹೊರಡು. ಸೋತು ಮಾತ್ರ ನನಗೆ ಮುಖವನ್ನು ತೋರಿಸಬೇಡ.

**ಹಂಸರಾಜ:**—ಮಾತೆಯೇ! ನಿನ್ನ ಆಜ್ಞೆಯು ನನಗೆ ಶಿರಸಾವಂದ್ಯವು. ನನಗೆ ಜಯ ಪ್ರಾಪ್ತವಾದರೆ ನಿನಗೆ ಮುಖವನ್ನು ತೋರಿಸುತ್ತೇನೆ. ಇಲ್ಲವಾದರೆ ನಿನ್ನ ತೊಡೆಯಗಿಂತ ಮೃದುವೂ ಕೋಮಲವೂ ಆದ ರಣದೇವಿಯ ತೊಡೆಯ ಮೇಲೆ ಮಲಗಿ ಅಖಂಡಿತವಾದ ವಿಶ್ರಾಂತಿಯನ್ನು ತೆಗೆದುಕೊಳ್ಳುವೆನು. ಇದೇ ನನ್ನ ನಿಶ್ಚಯ.

**ವೀರಸೇನ:**—(ತನ್ನೊಳಗೆ) ಅಹಾಹಾ!! ಎಷ್ಟು ಪ್ರಜಾವಾತ್ಸಲ್ಯವಿದು!! ಸುಶೀಲಾ ಮಹಾರಾಣಿಯವರು ತಮ್ಮ ಹೆಸರಿಗೆ ತಕ್ಕ ಜಾಣರಾಗಿಹರು. ಇವರ ವಿಚಾರಗಳು ಬಹು ಸ್ತುತ್ಯವಾಗಿವೆ. ಇದರ ಮೇಲಿಂದ ಕೂಸಿನ ತೊಟ್ಟಿಲವನ್ನು ಆಡಿಸುವ ಕೋಮಲವಾದ ಕೈಗಳು ರಾಷ್ಟ್ರರೂಪಿ ತೊಟ್ಟಿಲವನ್ನು ನಿರಾಯಾಸವಾಗಿ ಆಡಿಸುವರೆಂದು ವಿದ್ವಾಂಸರು ಎನ್ನುವುದು ಸುಳ್ಳಲ್ಲ. (ಪ್ರಕಟವಾಗಿ) ದೇವಿಯವರೇ! ಚಿಂತಿಸಬೇಡರಿ. ಗುಣಿಗಳ ಅಭಿಮಾನಿಯಾದ ರಣದೇವಿಯು ನಿಮ್ಮ ಮಗನ ಕೊರಳಿಗೆ ಜಯಮಾಲೆಯನ್ನು ಹಾಕೇ ಹಾಕುವಳು. ಇವನಿಗೆ ಅಪಜಯವಾಯಿತೆಂದರೆ ದೇವರ ಮನೆಯಲ್ಲಿ ಸಹ ನ್ಯಾಯಾನ್ಯಾಯದ ವಿಚಾರವಿಲ್ಲವೆಂದು ತಿಳಿಯುತ್ತೇನೆ.

**ಸುಶೀಲೆ:**— ವೀರಸೇನಾ! ನಿನ್ನ ನುಡಿಯು ಸತ್ಯವಾದರೆ ನಾನು ದೈವ ಶಾಲಿಯೆಂದು ತಿಳಿಯುತ್ತೇನೆ. ಚಂಪಕಮಾಲೇ! ಕದಲಾರತೆಯನ್ನು ತೆಗೆದು ಕೊಂಡು ಬಾ. ಹೋಗು.

**ಚಂಪಕಮಾಲೆ:**— ಅಪ್ಪಣೆ. (ಎಂದು ಹೋಗುವಳು.)

**ವಿಜಯ:**— ಅಣ್ಣಾ! ನಾನೂ ನಿಮ್ಮೊಡನೆ ಚಂಪಕನಗರಕ್ಕೆ ಬರುವೆನು.

**ಸುಶೀಲೆ:**— ವಿಜಯಾ! ನಿನ್ನ ಅಣ್ಣ ವೀರಸೇನನು ಕರೆದುಕೊಂಡು ಹೋದರೆ ಹೋಗು. ನಾನೇಕೆ ಬೇಡವೆನ್ನಲಿ. ವೀರಸೇನಾ! ಇವನನ್ನು ಯುದ್ಧಕ್ಕೆ ಕಳಿಸಲ್ಯಾ!

**ವೀರಸೇನ**:— ದೇವಿಯವರೇ! ಅವನು ನನ್ನ ತಮ್ಮನಾದರೂ ನಿಮ್ಮ ಮಗನೇ ಸರಿ. ಏಕೆಂದರೆ ಇವನು ದೊಡ್ಡವನಾದದ್ದು ನಿಮ್ಮ ಆಶ್ರಯದಿಂದಲೇ ನಿಮ್ಮ ಅಪ್ಪಣೆಯಾದರೆ, ನಾನು ಇವನನ್ನು ನನ್ನ ಸಂಗಡ ಕರೆದುಕೊಂಡು ಹೋಗುವೆನು.

**ಸುಶೀಲೆ:**— ನೀನು ಇಷ್ಟೆಂದರೆ ತೀರೇ ಹೋಯಿತು. ಇವನು ಸುಮ್ಮ ನಿದ್ದಾನೇ? (ನಗುತ್ತ) ಹಂಸಾ! ವಿಜಯನು ನಿಮ್ಮ ಸಂಗಡ ಇದ್ದರೆ ಒಳ್ಳೇದು. ಇವನು ಚಿಕ್ಕವನಿದ್ದರೂ ನೀವು ಹೇಳಿದ ಕೆಲಸವನ್ನು ಬಹು ಜಾಣ್ಮೆಯಿಂದ ಮಾಡುವನು. ಮೇಲಾಗಿ ನೀವು ಅಲ್ಲಿಗೆ ಗುಪ್ತರೀತಿಯಿಂದಲೇ ಹೋಗುವ ವರಿರುವಿರಿ.

**ಹಂಸರಾಜನು**:— ಮಾತೇ! ನಾನು ನಿನ್ನ ಇಚ್ಛೆಯಂತೆ ವರ್ತಿಸಲು ಸಿದ್ಧನಿರುತ್ತೇನೆ.

**ಚಂಪಕಮಾಲೆ:**—(ಬಂದು) ದೇವಿಯವರೇ! ಕದಲಾರತೆಯನ್ನು ತೆಗೆದುಕೊಂಡು ಬಂದಿರುವೆನು.

**ಸುಶೀಲೆ:**— ತಂದೆಯಾ, ಒಳ್ಳೇದಾಯಿತು. ಇವರಿಗೆ ಆರುತಿಯನ್ನು ಮಾಡು. ನೀವು ಮೂವರು ಸರಿದು ಒತ್ತಟ್ಟಿಗೆ ನಿಲ್ಲಿರಿ. ಆರುತಿಯನ್ನು ಮಾಡು ವಳು. (ಅವರು ಸರಿದು ನಿಲ್ಲುವರು. ನಂತರ ಅವರ ಮೇಲೆ ಮಂತ್ರಾಕ್ಷತೆ

ಗಳನ್ನು ಹಾಕಿ) ದೇವರು ನಿಮಗೆ ಕಲ್ಯಾಣಮಾಡಲಿ! (ಎಂದು ಸರಿದು ನಿಲ್ಲುವಳು.)

**ಸುಶೀಲೆ:**—(ಬಾಲಕನಾದ ವಿಜಯನಿಗೆ ಮುದ್ದು ಕೊಟ್ಟು) ವಿಜಯಾ! ಜಯಶಾಲಿಯಾಗಿ ಬಾ. ಹೊತ್ತಾಯಿತು. ಇನ್ನು ನೀವು ಹೊರಡುವ ಸಿದ್ಧತೆಯನ್ನು ಮಾಡಿರಿ. ವಿಜಯಶ್ರೀಯು ನಿಮ್ಮ ಕೊರಳಿಗೆ ಮಾಲೆಗಳನ್ನು ಹಾಕುವಳು.

**ಮೂವರು:**—ಅಪ್ಪಣೆ. (ಎಂದು ನಮಸ್ಕಾರಮಾಡಿ ಹೋಗುವರು.)



# ೪ನೆಯ ಪ್ರವೇಶವು.



## ಸ್ಥಳ:—ಸುಶೀಲಾದೇವಿಯ ಮಂದಿರದ ಹತ್ತಿರದಲ್ಲಿರುವ ಹಾದಿಯು.

---

ಪಾತ್ರಗಳು:—**ಹಂಸರಾಜ, ವೀರಸೇನ, ಕೋಕಿಲೆ ಮತ್ತು ವಿಜಯನು.**

---

ಬರುವ ರೀತಿ:—(ಕೋಕಿಲೆಯು ಹಂಸರಾಜನ ಮಾರ್ಗ ನಿರೀಕ್ಷಣ ಮಾಡುತ್ತ ಅಡ್ಡಾಡುತ್ತಿರುವಳು.)

**ಕೋಕಿಲೆ:**—(ತನ್ನೊಳಗೆ) ದೇವಿಯವರ ಮಂದಿರದ ಕಡೆಗೆ ಹೋದ ಹಂಸರಾಜರು ಇನ್ನೂ ಇಲ್ಲಿಗೇಕೆ ಬಂದಿರಲಿಕ್ಕಿಲ್ಲ? ಹೋಗಿ ಬಹಳ ಹೊತ್ತಾಗಿದೆ. ಇಂದು ನಾನು ಅಲ್ಲಿಗೆ ಹೋಗದಿದ್ದರೆ ನಮ್ಮ ಗುಟ್ಟೆಲ್ಲ ಬೈಲಿಗೆ ಬಿದ್ದು ಅನರ್ಥವಾಗುವುದಲ್ಲ!! ಏನು ಮಾಡಲಿ? ನಾನಾದರೂ ದೇವಿಯ ಮಂದಿರದ ಕಡೆಗೆ ಹೋಗಲ್ಯಾ! (ಎಂದು ತೆರೆಯಕಡೆಗೆ ನೋಡಿ) ಪ್ರಭುಗಳೇ ಬಂದರಲ್ಲ!! (ಎಂದು ಸರಿದು ನಿಲ್ಲುವಳು.)

**ಹಂಸರಾಜ:**—ಕೋಕಿಲೇ! ಮಾತೃದೇವಿಯ ಆಜ್ಞೆಯನ್ನು ತೆಗೆದು ಕೊಂಡು ಬಂದೆನು. ಇನ್ನು ಹೊರಡೋಣವೇ?

**ಕೋಕಿಲೆ:**—ಮಹಾರಾಜರೇ! ವಿಲಂಬಮಾಡಿ ಉಪಯೋಗವಿಲ್ಲ. ಸೂರ್ಯಾಸ್ತವಾಯಿತು. ಮಧ್ಯರಾತ್ರಿಯ ಸಮಯವಾಗುವುದರೊಳಗಾಗಿ ನಾವೆಲ್ಲರು ದುರ್ಗದಲ್ಲಿರತಕ್ಕದ್ದು. ಇಲ್ಲವಾದರೆ ಘಾತವಾಯಿತೆಂದು ತಿಳಿಯಿರಿ.

**ಹಂಸರಾಜ:**—ಈಗ ಹೊರಡುವ ವಿಚಾರವೇ ನಡೆದಿರುವುದು. ಮಿತ್ರಾ! ವೈರಿಯ ರಾಜ್ಯದೊಳಗೆ ಹೋಗುವುದು ಹೇಗೆ? ರಾತ್ರಿಯ ಸಮಯದಲ್ಲಿ ನಮ್ಮನ್ನು ಒಳಗೆ ಬಿಟ್ಟಾರೇ?

**ವೀರಸೇನ:**—ಈಗ ನಾವಿಬ್ಬರೂ ಅಲ್ಲಿಗೆ ಹೋಗಲೇ ಬಾರದು. ವಿಜಯನನ್ನು ಈ ಕೋಕಿಲೆಯೊಡನೆ ಆ ದುರ್ಗದ ಕಡೆಗೆ ಕಳಿಸಬೇಕು. ಎಂದರೆ ನಮ್ಮ ಕಾರ್ಯವು ಸಿದ್ಧಿಗೆ ಹೋಗುವುದು.

**ಹಂಸರಾಜ:**—ಇವನು ಇನ್ನೂ ಚಿಕ್ಕ ಬಾಲಕನು. ವೈರಿಯ ರಾಜ್ಯ ದಲ್ಲಿ ಒಬ್ಬನನ್ನೇ ಕಳಿಸಲು ನನಗೆ ಯುಕ್ತತೋರುವುದಿಲ್ಲ.

**ವೀರಸೇನ:**—ಅವನ ವಿಷಯವಾಗಿ ಚಿಂತಿಸುವುದೇ ಬೇಡ. (ವಿಜಯ ನಿಗೆ) ವಿಜಯಾ! ನೀನು ಆ ಭದ್ರವಾದ ದುರ್ಗವನ್ನು ಗುಣವಂತಿ ಎಂಬ ಉಡದ ಸಹಾಯದಿಂದ ಏರಿ ಒಳಗೆ ಪ್ರವೇಶಮಾಡಬಲ್ಲೆಯಾ?

**ವಿಜಯ:**—(ನಗುತ್ತ) ಓಹೋ!! ಅಪ್ಪಣೆಯಾಗಲಿ ಹೊರಡುವೆನು. ಕೋಕಿಲೇ! ನಾವು ಮೊದಲು ನಮ್ಮ ಸಾಮಗ್ರಿಗಳನ್ನೆಲ್ಲ ತೆಗೆದುಕೊಂಡು ದುರ್ಗದ ಕಡೆಗೆ ಹೊರಡುವ ನಡೆ. ಇವರು ಹಿಂದುಗಡೆ ಬರುವರು. (ಹಂಸ ರಾಜನಿಗೆ) ಪ್ರಭುಗಳೇ! ನಾನು ಸಣ್ಣ ಹುಡುಗನೆಂದು ತಿಳಿಯಬೇಡರಿ. ಅಂಥ ಪ್ರಸಂಗಬಂದರೆ ವೀರರಂತೆ ಹೋರಾಡುವುದಕ್ಕೆ ಎಂದಿಗೂ ಹಿಂಜರಿಯು ವವನಲ್ಲ. ನನ್ನ ಮೇಲೆ ತಮ್ಮ ಕೃಪಾಛತ್ರವಿದ್ದರಾಯಿತು.

**ವೀರಸೇನ:**—ವಿಜಯಾ! ಕೃತಿಯನ್ನು ಮಾಡಿ ಹೆಸರು ಪಡೆ.

**ವಿಜಯ:**—ಕ್ಷಮಿಸರಿ. ಕೃತಿಯನ್ನು ಮಾಡಿದ ನಂತರವೇ ನಾನು

ನನ್ನ ಮುಖವನ್ನು ನಿಮಗೆ ತೋರಿಸುವೆನು. (ಎಂದು) ಪ್ರಭುಗಳೇ! ಈ ಕೋಕಿಲೆಯೊಡನೆ ಹೋಗಲು ನನಗೆ ಅಪ್ಪಣೆಯಾಗಲಿ.

**ಹಂಸರಾಜ:**—ವಿಜಯಾ! ಹೋಗುವಿಯಂತೆ ನಿಲ್ಲು. ಇಷ್ಟೇಕೆ ಆತುರನಾಗಿರುವೆ?

**ವಿಜಯ:**—ಗುಣಮಣಿಯಾದ ಕಮಲಾದೇವಿಯನ್ನು ಕಾಡುವ ದುಷ್ಟರ ಹಲ್ಲುಗಳನ್ನು ಮುರಿಯುವುದಕ್ಕೆ ಹೋಗುವೆನು.

**ವೀರಸೇನ:**—ವಿಜಯಾ! ಸುಮ್ಮನಿರಬಾರದೆ, ಹೀಗೆ ಮನಸ್ಸಿಗೆ ಬಂದಂತೆ ದೊಡ್ಡವರಲ್ಲಿ ಮಾತನಾಡಬಾರದು.

**ಹಂಸರಾಜ:**—ವೀರಸೇನಾ! ಅವನನ್ನು ಹೆದರಿಸಬೇಡ; ಸಣ್ಣವನು. ಕೋಕಿಲೇ! ಇವನನ್ನು ಕರೆದುಕೊಂಡು ದುರ್ಗದ ಕಡೆಗೆ ಹೋಗುವುದು ನಿನ್ನಿಂದಾದೀತೆ?

**ಕೋಕಿಲೆ:**—(ವಿನಯದಿಂದ) ಇವನು ನನ್ನ ಸಂಗಡ ಬರಲಿ. ಮಹಾರಾಜರೇ! ನೀವು ಯಾವಾಗ ಬರುವಿರಿ?

**ವೀರಸೇನ:**—ವಿಜಯಾ! ನೀನು ಕೋಕಿಲೆಯ ಸಹಾಯದಿಂದ ಕಮಲಾದೇವಿಯವರನ್ನು ಕರೆದುಕೊಂಡು ಆ ನಗರದ ಹತ್ತಿರದಲ್ಲಿ ಇರುವ ಮಾಲತೀ ವನಕ್ಕೆ ಬಾ. ನಾವು ಅಲ್ಲಿಯೇ ಹತ್ತಿರ ಸುಳಿದಾಡುತ್ತಿರುವೆವು.

**ಕೋಕಿಲೆ:**—ಒಳ್ಳೇದು. ಪ್ರಭುಗಳೇ! ಹೋಗಲು ಅಪ್ಪಣೆಯಾಗಲಿ.

**ಹಂಸರಾಜ:**—ಕೋಕಿಲೇ! ಈ ರತ್ನಮಾಲಿಕೆಯನ್ನೂ ಕಠಾರಿಯನ್ನೂ ನಿನ್ನ ಸಖಿಯ ಕೈಯಲ್ಲಿಯೇ ಕೊಡು. (ಅವುಗಳನ್ನು ಕೊಟ್ಟು) ಹೋಗಿಬನ್ನಿರಿ. ಕೆಲಸವನ್ನು ಮಾತ್ರ ಬಹು ಎಚ್ಚರದಿಂದ ಮಾಡಿರಿ.

**ವಿಜಯ**
**ಕೋಕಿಲೆ** } ಒಳ್ಳೇದು. ಹೋಗಿ ಬರುವೆವು. (ಎಂದು ಇಬ್ಬರೂ ಹೋಗುವರು.)

**ಹಂಸರಾಜ:**—ನಾವು ಯಾವಾಗ ಹೊರಡೋಣ.

**ವೀರಸೇನ:**—ತಡವೇಕೆ? ನಾವೂ ಅವರನ್ನೇ ಹಿಂಬಾಲಿಸಿ ಹೋಗುವ.

**ಹಂಸರಾಜ:**—ಒಳ್ಳೇದು. ದೇವಾ! ನಾವಂತೂ ಗುಣಿಯ ಮುಕ್ತತೆಯನ್ನು ಮಾಡಲು ಹೊರಟಿರುವೆವು. ಇನ್ನು ಮೇಲೆ ನಮ್ಮೆಲ್ಲರನ್ನು ರಕ್ಷಿಸುವವನು ನೀನೇ!

**೪೦ ಪದ.** ಧಾಟಿ:—(ಮನಸು ಕರಗದಿರು.)

ಮುರದಮನಾ ಪಾಲಿಸು ಸುರನರರತ್ರಾತನೇ ಬಾರೈ ।
ಎರಗುವೆನಾ ಕಂಸಾರೀ ಸದಾದಯುವನೀ ತೋರೈ ॥ ಪ ॥
ನರಕಾಸುರಹಂತಾ ಭಯ ನೀಗುತ ನಲೆವಾ ಮೆರೆವಾ ।
ವೀರನೀನೆ । ಕರುಣಿ ನೀನೆ ।
ಆರಮಣಿಗೆ ದಯತೋರೈ ॥ ೧ ॥

ಎಲ್ಲರೂ ಹೋಗುವರು.

೪ನೆಯ ಅಂಕವು ಮುಗಿದುದು.

ಶ್ರೀರಾಮ

|| ಓಂ ||

|| श्रीराम ||

# ೫ನೆಯ ಅಂಕ.



ಸ್ಥಳ:— ಚಂದ್ರಶೇಖರನ ಭದ್ರವಾದ ದುರ್ಗವು.

ಪಾತ್ರಗಳು:— **ಚಿತ್ರರೇಖೆ, ಕಮಲೆ, ಕೋಕಿಲೆ, ಮತ್ತು ವಿಜಯನು.**



ಬರುವ ರೀತಿಯು:— (ಕಮಲೆಯು ವೀಣೆಯನ್ನು ಬಾರಿಸುತ್ತ ದೇವರಸ್ತೋತ್ರವನ್ನು ಮಾಡುತ್ತಿರಬೇಕು. ಚಿತ್ರರೇಖೆಯು ಹತ್ತಿರ ಕುಳಿತಿರಬೇಕು.)

**೪೧ ಪದ.** ಧಾಟಿ:—(**अजि टाकु गडे धन वेषा**)

ಸಖಿಕಾಯುವನೇ ಗುಣಕೋಶಾ |
ಸುಖವೀವವಿಶ್ವಪಾಲಾ ಲೋಕೇಶಾ || ಪ ||
ಅನುದಿನಮಾರ್ಗ ತೋರಿಸುರೇಶಾ ತರೆಯುತಲೇ ಯೀ
ಭವಪಾಶಾ |
ನಾನಾ ತೆರದಲಿ ಪೊರೆವುದು| ಎನ್ನನು ಶ್ರೀಶೇಷಾಚಲವಾಸಾ
|| ೧ ||

ಅನಾಥ ಬಂಧೋ! ಇನ್ನು ಮೇಲೆ ನಾನು ಬದುಕಿಯಾದರೂ ಮಾಡುವುದೇನು? (ಎಂದು ಉಸುರು ಹಾಕುವಳು.)

**ಚಿತ್ರರೇಖೆ:**— ಕಮಲೇ! ಇದೇನು ಹೀಗೇಕೆ ನಿಟ್ಟುಸುರು ಬಿಡುವೆ? ನಿನಗೆ ಯಾರಾದರೂ ಅಪಮಾನ ಮಾಡಿದ್ದರೆ ಅಥವಾ ಮನಸ್ಸಿಗೆ ಹತ್ತುವ ಶಬ್ದಗಳನ್ನು ಆಡಿದ್ದರೆ ಹೇಳು.

**ಕಮಲೆ:**—(ದುಃಖದಿಂದ) ಚಿತ್ರರೇಖೇ! ಏನು ಹೇಳಲಿ. ನಾನು ಸಾಯುವ ವರೆಗೂ ನನ್ನ ಸಂಕಟವು ದೂರಾಗದು; ಭಗವಂತನೇ ಅದರಿಂದ ಪಾರುಗಾಣಿಸಬೇಕು. ನಿನ್ನೆ ನನ್ನ ತಂದೆಯು ಹೇಳಿ ಕಳುಹಿಸಿದ ಆಜ್ಞೆಯು ಬಹು ಕಠೋರವಾಗಿದೆ. ನಾನೇನು ಅಬಲೆಯು, ನನ್ನಿಂದ ಏನಾಗತಕ್ಕದ್ದದೆ? (ಎಂದು ಬಹು ಖಿನ್ನಳಾಗಿ ನಿಟ್ಟುಸುರು ಬಿಡುತ್ತ ಕುಳಿತುಕೊಳ್ಳುವಳು.)

**ಕೋಕಿಲೆ:**—(ವಿಜಯನನ್ನು ಕರೆದುಕೊಂಡು ಹಿಂದುಗಡೆ ಬಾಗಿಲಿನಿಂದ ಒಳಗೆ ಬರುತ್ತ ತನ್ನೊಳಗೆ) ಬಾಲಕನಾದ ವಿಜಯನ ಸಾಹಸವು ಹೆಚ್ಚಿನದು. ಅವನು ಚಿಕ್ಕವನಿದ್ದರೂ ಗುಣವಂತಿಯು ಟೊಂಕಕ್ಕೆ ಹಗ್ಗವನ್ನು ಕಟ್ಟಿ, ಅದನ್ನು ದುರ್ಗದ ಗೋಡೆಯು ಮೇಲೆ ಹತ್ತಿಸಲು ಅದು ಓಡುತ್ತಹೋಗಿ, ದುರ್ಗದ ಮೇಲಿದ್ದ ಬಂಡೆಯುನ್ನು ಬಹು ಗಟ್ಟಿಯಾಗಿ ಹಿಡಿದುಕೊಂಡಿತು. ಹಾಗೂ ವಿಜಯನು ಹಗ್ಗವನ್ನು ಹಿಡಿದದ್ದೊಂದೇ ತಡ. ಅವನು ಸರಸರ ಮೇಲಕ್ಕೇರಿ, ನನ್ನನ್ನು ಸಹ ಮೇಲಕ್ಕೆಳೆದುಕೊಂಡನು. ಔವಯ್ಯಾ!! ನಾನು ಮೇಲೆ ಬರುವ ವರೆಗೆ ನನ್ನ ಭಯವೇ ದೂರಾಗಿದ್ದಿಲ್ಲ. ಈಗ ಮಾತ್ರ ಸ್ವಲ್ಪ ಸಮಾಧಾನವಾಯಿತು. (ಎಂದು ಕಮಲೆಯು ಕಡೆಗೆ ನೋಡಿ, ಆಶ್ಚರ್ಯದಿಂದ) ಇದೇನು!! ನನ್ನ ಪ್ರಿಯ ಸಖಿಯು ಕಣ್ಣೀರು ಹಾಕುತ್ತಿರುವಳಲ್ಲ! ಮುಖವು ಬಾಡಿಹೋಗಿದೆ. (ಎಂದು ವಿಜಯನ ಕಡೆ ತಿರಿಗಿ) ವಿಜಯಾ! ಈ ನನ್ನ ಪ್ರಿಯ ಸಖಿಯ ದೀನಾವಸ್ಥೆಯನ್ನು ನೋಡಿದೆಯಾ?

**ವಿಜಯ:**—ಕೋಕಿಲೇ! ದೈವದ ಬಲೆಗೆ ಸಿಕ್ಕದವರೇ ಇಲ್ಲ. ವಿಧಿಯ ಬಲವನ್ನು ಯಾರಿಗೆ ತಾನೆ ಅಡಗಿಸಲು ಆಗುವುದು. ಆದರೆ ನಿಮ್ಮೆಲ್ಲರನ್ನು ಹೀಗೆ ದುಃಖಕ್ಕೆ ಗುರಿಮಾಡಿದ ವಿಧಿಯು ಗುಣಿಯಾದ ಕಮಲಾದೇವಿಯ ಮುಕ್ತತೆಯನ್ನು ಮಾಡುವ ಪುಣ್ಯಪ್ರಸಂಗವನ್ನು ನನಗೆ ಒದಗಿಸಿಕೊಟ್ಟು, ನನ್ನ ಮೇಲೆ ಉಪಕಾರವನ್ನೇ ಮಾಡಿತು.

**ಕೋಕಿಲೆ:**—(ಆತ್ಮಗತಂ) ಇವನು ವಯಸ್ಸಿನಿಂದ ಚಿಕ್ಕವನಿದ್ದರೂ ಜ್ಞಾನದಿಂದ ದೊಡ್ಡವನಾಗಿದ್ದಾನೆ. ಇದರಲ್ಲಿ ಆಶ್ಚರ್ಯವೇನು? ಗುಣಿಗಳ ಸಹವಾಸದಿಂದ ಬಾಲಕನಿಗೆ ಸಹ ದಿವ್ಯ ಜ್ಞಾನವು ಪ್ರಾಪ್ತವಾಗುವುದು. (ಪ್ರಕಟವಾಗಿ) ವಿಜಯಾ! ನಾವು ಈ ಗೋಡೆಯು ಮರೆಗೆ ತುಸು ನಿಲ್ಲುವಾ ಎಂದರೆ

ಇವಳ ಮನೋರಥವೆಲ್ಲ ನಮಗೆ ತಿಳಿಯುವುದು. (ಎಂದು ಗೋಡೆಯ ಮರೆಗೆ ನಿಲ್ಲುವಳು.)

**ಚಿತ್ರರೇಖೆ:**—ಕಮಲೇ! ಕಣ್ಣೀರು ಏಕೆ ಸುರಿಸುವಿ? ನಿನ್ನ ಮನಸ್ಸಿನಲ್ಲಿ ಇದ್ದುದನ್ನು ನನ್ನ ಮುಂದೆ ಹೇಳು. ನಿನಗೆ ಇಷ್ಟು ದುಃಖವನ್ನು ಕೊಡುತ್ತಿರುವ ಸಂಗತಿಯಾದರೂ ಯಾವುದು?

**ಕಮಲೆ:**—ಆ ವಾರ್ತೆಯನ್ನು ಹೇಳುವುದಕ್ಕಿಂತ ಮೊದಲು ವಿಷವನ್ನು ಕುಡಿದು ಸಾಯುವುದೇ ಲೇಸು.

**ಚಿತ್ರರೇಖೆ:**—ಹೀಗೇಕೆನ್ನುವಿಯೇ? ನಿನ್ನ ಮೇಲೆ ಬಂದ ಅಂಥ ಸಂಕಟವಾದರೂ ಯಾವುದು? ಹೇಳು ಎಂದರೆ ಏನಾದರೂ ತಕ್ಕ ಉಪಾಯವನ್ನು ಮಾಡಲಿಕ್ಕೆ ಬಂದೀತು. ಸುಮ್ಮನೆ ಅಳುತ್ತ ಕುಳಿತರೆ ಏನಾಗುವುದು? ಬಚ್ಚಿಟ್ಟರೆ ನೋಡು ನಿನಗೆ ನನ್ನ ಕೊರಳಾಣೆಯಿದೆ.

**ಕಮಲೆ:**—ಸಖಿಯೇ! ಹೇಳುವುದು ಏನು? ನಾನು ಸಾಯದ ಹೊರತು ನನ್ನ ಮೇಲೆ ಬಂದಿರುವ ಸಂಕಟವು ದೂರಾಗುವ ಆಶೆಯೇ ಇಲ್ಲ. ಆ ನನ್ನ ಮಾನಸಹಂಸನು ಯಾವಾಗ ಬರುವನೋ! (ಎಂದು ಸುಮ್ಮಗಾಗುವಳು.)

**ಚಿತ್ರರೇಖೆ:**—ಅವನ ಸಲುವಾಗಿ ಏನು ನೀನು ಇಷ್ಟು ಚಿಂತಿಸುವುದು?

**ಕಮಲೆ:**—ಅಹುದು.

**ಚಿತ್ರರೇಖೆ:**—ಕೋಕಿಲೆಯು ಹಸ್ತಿನಾವತಿಗೆ ಹೋಗಿ ಬಹಳೇ ಹೊತ್ತಾಗಿದೆ. ಇನ್ನು ಸ್ವಲ್ಪ ವೇಳೆಯಲ್ಲಿ ಇಲ್ಲಿಗೆ ಬಂದಾಳು. ಇಷ್ಟು ಅಧೀರಳಾಗಬೇಡ. ತಾಳು. ಅವಳು ಬರುವ ವರೆಗೆ ಬೇಕಾದರೆ ನೀನು ಈ ಚಿತ್ರದಲ್ಲಿಯ ಹಂಸರಾಜನನ್ನು ನೋಡಿ ಸಂತೋಷಬಡು. ದುಃಖಿಸಿದರೇನಾಗುವುದು? (ಎಂದು ಕೈತಪ್ಪಿ ಕುಮತಿರಾಜನ ಚಿತ್ರವನ್ನು ಕಮಲೆಯ ಕೈಯಲ್ಲಿ ಕೊಡುವಳು.)

**ಕಮಲೆ:**—(ಚಿತ್ರವನ್ನು ದಿಟ್ಟಿಸಿ ನೋಡಿ ಹುಬ್ಬುಗಂಟಿಕ್ಕಿ ಸಿಟ್ಟಿನಿಂದ ಕೈಯಲ್ಲಿಯ ಚಿತ್ರವನ್ನು ದೂರಬಿಸಾಡಿ ಒಗೆದು) ಚಿತ್ರರೇಖೇ! ನೀನು ಹೀಗೆ ವಂಚನೆ ಮಾಡುವಿಯಾ? ನೀಚನೂ ಚಾಂಡಾಲನೂ ಸ್ತ್ರೀಲಂಪಟನೂ ಆದ

**ಹಂಸರಾಜ:**—ಒಳ್ಳೇದು. ದೇವಾ! ನಾವಂತೂ ಗುಣಿಯ ಮುಕ್ತತೆಯನ್ನು ಮಾಡಲು ಹೊರಟಿರುವೆವು. ಇನ್ನು ಮೇಲೆ ನಮ್ಮೆಲ್ಲರನ್ನು ರಕ್ಷಿಸುವವನು ನೀನೇ!

**೪೦ ಪದ.** ಧಾಟಿ:—(ಮನಸು ಕರಗದಿರು.)

ಮುರದಮನಾ ಪಾಲಿಸು ಸುರನರರತ್ರಾತನೇ ಬಾರೈ |
ಎರಗುವೆನಾ ಕಂಸಾರೀ ಸದಾದಯವನೀ ತೋರೈ || ಪ |
ನರಕಾಸುರಹಂತಾ ಭಯ ನೀಗುತ ನಲೆವಾ ಮೆರೆವಾ |
ವೀರನೀನೆ | ಕರುಣಿ ನೀನೆ |
ಆರಮಣಿಗೆ ದಯತೋರೈ || ೧ ||

**ಎಲ್ಲರೂ ಹೋಗುವರು.**



ಳನೆಯ ಅಂಕವು ಮುಗಿದುದು.





॥ ॐ ॥

॥ श्रीराम ॥

# ೫ನೆಯ ಅಂಕ.



ಸ್ಥಳ: — ಚಂದ್ರಶೇಖರನ ಭದ್ರವಾದ ದುರ್ಗವು.

ಪಾತ್ರಗಳು: — **ಚಿತ್ರರೇಖೆ, ಕಮಲೆ, ಕೋಕಿಲೆ, ಮತ್ತು ವಿಜಯನು.**



ಬರುವ ರೀತಿಯು: — (ಕಮಲೆಯು ವೀಣೆಯನ್ನು ಬಾರಿಸುತ್ತ ದೇವರಸ್ತೋತ್ರವನ್ನು ಮಾಡುತ್ತಿರಬೇಕು. ಚಿತ್ರರೇಖೆಯು ಹತ್ತಿರ ಕುಳಿತಿರಬೇಕು.)

**೪೧ ಪದ.** ಧಾಟಿ: — **(आजि टाकु गडे धन वेषा)**

ಸಖಿಕಾಯುವನೇ ಗುಣಕೋಶಾ ।
ಸುಖವೀವವಿಶ್ವಪಾಲಾ ಲೋಕೇಶಾ ॥ ಪ ॥
ಅನುದಿನಮಾರ್ಗ ತೋರಿಸುರೇಶಾ ತರೆಯುತಲೇ ಯೀ
ಭವಪಾಶಾ ।
ನಾನಾ ತೆರದಲಿ ಪೊರೆವುದು। ಎನ್ನನು ಶ್ರೀಶೇಷಾಚಲವಾಸಾ
॥ ೧ ॥

ಅನಾಥ ಬಂಧೋ! ಇನ್ನು ಮೇಲೆ ನಾನು ಬದುಕಿಯಾದರೂ ಮಾಡುವುದೇನು? (ಎಂದು ಉಸುರು ಹಾಕುವಳು.)

**ಚಿತ್ರರೇಖೆ:** — ಕಮಲೇ! ಇದೇನು ಹೀಗೇಕೆ ನಿಟ್ಟುಸುರು ಬಿಡುವೆ? ನಿನಗೆ ಯಾರಾದರೂ ಅಪಮಾನ ಮಾಡಿದ್ದರೆ ಅಥವಾ ಮನಸ್ಸಿಗೆ ಹತ್ತುವ ಶಬ್ದಗಳನ್ನು ಆಡಿದ್ದರೆ ಹೇಳು.

**ಕಮಲೆ:**—(ದುಃಖದಿಂದ) ಚಿತ್ರರೇಖೇ! ಏನು ಹೇಳಲಿ. ನಾನು ಸಾಯುವ ವರೆಗೂ ನನ್ನ ಸಂಕಟವು ದೂರಾಗದು; ಭಗವಂತನೇ ಅದರಿಂದ ಪಾರುಗಾಣಿಸಬೇಕು. ನಿನ್ನೆ ನನ್ನ ತಂದೆಯು ಹೇಳಿ ಕಳುಹಿಸಿದ ಆಜ್ಞೆಯು ಬಹು ಕಠೋರವಾಗಿದೆ. ನಾನೇನು ಅಬಲೆಯು, ನನ್ನಿಂದ ಏನಾಗತಕ್ಕದ್ದದೆ? (ಎಂದು ಬಹು ಖಿನ್ನಳಾಗಿ ನಿಟ್ಟುಸುರು ಬಿಡುತ್ತ ಕುಳಿತುಕೊಳ್ಳುವಳು.)

**ಕೋಕಿಲೆ:**—(ವಿಜಯನನ್ನು ಕರೆದುಕೊಂಡು ಹಿಂದುಗಡೆ ಬಾಗಿಲಿನಿಂದ ಒಳಗೆ ಬರುತ್ತ ತನ್ನೊಳಗೆ) ಬಾಲಕನಾದ ವಿಜಯನ ಸಾಹಸವು ಹೆಚ್ಚಿನದು. ಅವನು ಚಿಕ್ಕವನಿದ್ದರೂ ಗುಣವಂತಿಯು ಟೊಂಕಕ್ಕೆ ಹಗ್ಗವನ್ನು ಕಟ್ಟಿ, ಅದನ್ನು ದುರ್ಗದ ಗೋಡೆಯು ಮೇಲೆ ಹತ್ತಿಸಲು ಅದು ಓಡುತ್ತಹೋಗಿ, ದುರ್ಗದ ಮೇಲಿದ್ದ ಬಂಡೆಯನ್ನು ಬಹು ಗಟ್ಟಿಯಾಗಿ ಹಿಡಿದುಕೊಂಡಿತು. ಹಾಗೂ ವಿಜಯನು ಹಗ್ಗವನ್ನು ಹಿಡಿದದ್ದೊಂದೇ ತಡ. ಅವನು ಸರಸರ ಮೇಲಕ್ಕೇರಿ, ನನ್ನನ್ನು ಸಹ ಮೇಲಕ್ಕೆಳೆದುಕೊಂಡನು. ಔವಯ್ಯಾ!! ನಾನು ಮೇಲೆ ಬರುವ ವರೆಗೆ ನನ್ನ ಭಯವೇ ದೂರಾಗಿದ್ದಿಲ್ಲ. ಈಗ ಮಾತ್ರ ಸ್ವಲ್ಪ ಸಮಾಧಾನವಾಯಿತು. (ಎಂದು ಕಮಲೆಯು ಕಡೆಗೆ ನೋಡಿ, ಆಶ್ಚರ್ಯದಿಂದ) ಇದೇನು!! ನನ್ನ ಪ್ರಿಯ ಸಖಿಯು ಕಣ್ಣೀರು ಹಾಕುತ್ತಿರುವಳಲ್ಲ! ಮುಖವು ಬಾಡಿಹೋಗಿದೆ. (ಎಂದು ವಿಜಯನ ಕಡೆ ತಿರಿಗಿ) ವಿಜಯಾ! ಈ ನನ್ನ ಪ್ರಿಯ ಸಖಿಯ ದೀನಾವಸ್ಥೆಯನ್ನು ನೋಡಿದೆಯಾ?

**ವಿಜಯ:**— ಕೋಕಿಲೇ! ದೈವದ ಬಲೆಗೆ ಸಿಕ್ಕದವರೇ ಇಲ್ಲ. ವಿಧಿಯ ಬಲವನ್ನು ಯಾರಿಗೆ ತಾನೆ ಅಡಗಿಸಲು ಆಗುವುದು. ಆದರೆ ನಿಮ್ಮೆಲ್ಲರನ್ನು ಹೀಗೆ ದುಃಖಕ್ಕೆ ಗುರಿಮಾಡಿದ ವಿಧಿಯು ಗುಣಿಯಾದ ಕಮಲಾದೇವಿಯ ಮುಕ್ತತೆಯನ್ನು ಮಾಡುವ ಪುಣ್ಯಪ್ರಸಂಗವನ್ನು ನನಗೆ ಒದಗಿಸಿಕೊಟ್ಟು, ನನ್ನ ಮೇಲೆ ಉಪಕಾರವನ್ನೇ ಮಾಡಿತು.

**ಕೋಕಿಲೆ:**—(ಆತ್ಮಗತಂ) ಇವನು ವಯಸ್ಸಿನಿಂದ ಚಿಕ್ಕವನಿದ್ದರೂ ಜ್ಞಾನದಿಂದ ದೊಡ್ಡವನಾಗಿದ್ದಾನೆ. ಇದರಲ್ಲಿ ಆಶ್ಚರ್ಯವೇನು? ಗುಣಿಗಳ ಸಹವಾಸದಿಂದ ಬಾಲಕನಿಗೆ ಸಹ ದಿವ್ಯ ಜ್ಞಾನವು ಪ್ರಾಪ್ತವಾಗುವುದು. (ಪ್ರಕಟವಾಗಿ) ವಿಜಯಾ! ನಾವು ಈ ಗೋಡೆಯು ಮರೆಗೆ ತುಸು ನಿಲ್ಲುವಾ ಎಂದರೆ

ಇವಳ ಮನೋರಥವೆಲ್ಲ ನಮಗೆ ತಿಳಿಯುವುದು. (ಎಂದು ಗೋಡೆಯ ಮರೆಗೆ ನಿಲ್ಲುವಳು.)

**ಚಿತ್ರರೇಖೆ**:—ಕಮಲೇ! ಕಣ್ಣೀರು ಏಕೆ ಸುರಿಸುವಿ? ನಿನ್ನ ಮನಸ್ಸಿನಲ್ಲಿ ಇದ್ದುದನ್ನು ನನ್ನ ಮುಂದೆ ಹೇಳು. ನಿನಗೆ ಇಷ್ಟು ದುಃಖವನ್ನು ಕೊಡುತ್ತಿರುವ ಸಂಗತಿಯಾದರೂ ಯಾವುದು?

**ಕಮಲೆ**:—ಆ ವಾರ್ತೆಯನ್ನು ಹೇಳುವುದಕ್ಕಿಂತ ಮೊದಲು ವಿಷವನ್ನು ಕುಡಿದು ಸಾಯುವುದೇ ಲೇಸು.

**ಚಿತ್ರರೇಖೆ**:—ಹೀಗೇಕೆನ್ನುವಿಯೇ? ನಿನ್ನ ಮೇಲೆ ಬಂದ ಅಂಥ ಸಂಕಟವಾದರೂ ಯಾವುದು? ಹೇಳು ಎಂದರೆ ಏನಾದರೂ ತಕ್ಕ ಉಪಾಯವನ್ನು ಮಾಡಲಿಕ್ಕೆ ಬಂದೀತು. ಸುಮ್ಮನೆ ಅಳುತ್ತ ಕುಳಿತರೆ ಏನಾಗುವುದು? ಬಚ್ಚಿಟ್ಟರೆ ನೋಡು ನಿನಗೆ ನನ್ನ ಕೊರಳಾಣೆಯಿದೆ.

**ಕಮಲೆ**:—ಸಖಿಯೇ! ಹೇಳುವುದು ಏನು? ನಾನು ಸಾಯದ ಹೊರತು ನನ್ನ ಮೇಲೆ ಬಂದಿರುವ ಸಂಕಟವು ದೂರಾಗುವ ಆಶೆಯೇ ಇಲ್ಲ. ಆ ನನ್ನ ಮಾನಸಹಂಸನು ಯಾವಾಗ ಬರುವನೋ! (ಎಂದು ಸುಮ್ಮಗಾಗುವಳು.)

**ಚಿತ್ರರೇಖೆ**:—ಅವನ ಸಲುವಾಗಿ ಏನು ನೀನು ಇಷ್ಟು ಚಿಂತಿಸುವುದು?

**ಕಮಲೆ**:—ಅಹುದು.

**ಚಿತ್ರರೇಖೆ**:—ಕೋಕಿಲೆಯು ಹಸ್ತಿನಾವತಿಗೆ ಹೋಗಿ ಬಹಳೇ ಹೊತ್ತಾಗಿದೆ. ಇನ್ನು ಸ್ವಲ್ಪ ವೇಳೆಯಲ್ಲಿ ಇಲ್ಲಿಗೆ ಬಂದಾಳು. ಇಷ್ಟು ಅಧೀರಳಾಗಬೇಡ. ತಾಳು. ಅವಳು ಬರುವ ವರೆಗೆ ಬೇಕಾದರೆ ನೀನು ಈ ಚಿತ್ರದಲ್ಲಿಯ ಹಂಸರಾಜನನ್ನು ನೋಡಿ ಸಂತೋಷಬಡು. ದುಃಖಿಸಿದರೇನಾಗುವುದು? (ಎಂದು ಕೈತಪ್ಪಿ ಕುಮತಿರಾಜನ ಚಿತ್ರವನ್ನು ಕಮಲೆಯ ಕೈಯಲ್ಲಿ ಕೊಡುವಳು.)

**ಕಮಲೆ**:—(ಚಿತ್ರವನ್ನು ದಿಟ್ಟಿಸಿ ನೋಡಿ ಹುಬ್ಬುಗಂಟಿಕ್ಕಿ ಸಿಟ್ಟಿನಿಂದ ಕೈಯಲ್ಲಿಯ ಚಿತ್ರವನ್ನು ದೂರಬಿಸಾಡಿ ಒಗೆದು) ಚಿತ್ರರೇಖೇ! ನೀನು ಹೀಗೆ ವಂಚನೆ ಮಾಡುವಿಯಾ? ನೀಚನೂ ಚಾಂಡಾಲನೂ ಸ್ತ್ರೀಲಂಪಟನೂ ಆದ

ಕುಮತಿಯ ಚಿತ್ರವನ್ನು ನನ್ನ ಕೈಯಲ್ಲಿ ಕೊಟ್ಟೆಯಾ? ಇದಕ್ಕಿಂತ ಕೈಮೇಲೆ ಕೆಂಡವನ್ನಿಟ್ಟಿದ್ದರೆ ನೆಟ್ಟಗಾಗುತ್ತಿದ್ದಲ್ಲವೇ? ಅಯ್ಯೋ! ನನ್ನ ಹಣೆಯ ಬರಹವೇ!! ನಾನು ಈ ದುಷ್ಟನ ಮುಖವನ್ನು ನೋಡಬೇಕಾಯಿತಲ್ಲ. ಸಖಿಯೇ!ಪತಿವ್ರತೆಯರು ಅನ್ಯಪುರುಷರ ಮುಖಗಳನ್ನು ನೋಡಲು ಬಯಸುವುದಿಲ್ಲವೆಂದು ನಿನಗೆ ಗೊತ್ತಿಲ್ಲವೆ? ನೀನೇನು ಮಾಡುವಿ. ಉಪಾಯವಿಲ್ಲ. ಆದದ್ದಾಯಿತು. ಚಿತ್ರರೇಖೆ! ಆ ದುಷ್ಟನ ಚಿತ್ರವು ನನ್ನ ಕಣ್ಣೆದುರಿಗೇ ಬೇಡ. ಭೂಮಿಗೆ ಭಾರವಾದ ಮತ್ತು ಸಜ್ಜನರನ್ನು ಹೀಯಾಳಿಸುವ ಆ ನೀಚನ ಚಿತ್ರವು ಯಾರ ಮನೆಯಲ್ಲಿಯೂ ಇರಲು ಯೋಗ್ಯವಲ್ಲ. (ಎಂದು ಚಿತ್ರವನ್ನು ಕೈಯಲ್ಲಿ ತೆಗೆದುಕೊಂಡು ಅದನ್ನು ಹರಿದು, ಅದರ ಚೂರುಗಳನ್ನು ಸಖಿಯ ಮೇಲೆ ಒಗೆದು) ಇಕೋ! ಸಖಿಯೇ! ಇವುಗಳನ್ನು ಸುಟ್ಟು ಬಾ ಹೋಗು. ದುಷ್ಟರ ಚಿತ್ರವು ಜಗತ್ತಿನಲ್ಲಿ ಸಹ ಇರಬಾರದು. ಕಂಡೆಯಾ? ನಾನೂ ನಿನಗೆ ಬೇಡಾಗಿದ್ದರೆ, ನೀನು ನನ್ನನ್ನು ಈ ದುರ್ಗದ ಹಿಂಭಾಗದಲ್ಲಿರುವ ಕಂದಕದಲ್ಲಿ ನೂಕಿಸಿಬಿಡಬೇಕಾಗಿತ್ತು. ಯಾಕೆ ಸ್ತಬ್ಧಳಾದೆ? ಹೂ!! ಏನೆಂಬುದನ್ನು ಹೇಳು. ಸಖೀ! ಇಷ್ಟು ದಿವಸ ನಾನು ಬದುಕಿದ್ದು ನಿನಗೆ ಭಾರವಾಗಿದಲ್ಲೆ? ಉಪಾಯವಿಲ್ಲ. ನೀನೇನು ಮಾಡುವೆ? ನಾನು ನಿರ್ಭಾಗ್ಯಳು. ದೈವಗೇಡಿಗಳಿಗೆ ಎಲ್ಲಿ ಹೋದರೂ ಕೆಡಕೇ. ಚಿತ್ರರೇಖೇ! ನಂಬಿದವರ ಕೊರಳನ್ನು ಹೀಗೆ ಕೊಯ್ಯುವರೆ? ಅಯ್ಯೋ! ನಾನು ಎಂಥ ಹತಭಾಗಿಯು.

**೪೨ ಪದ.** ಧಾಟಿ:—(**हाय संसार तरु**)

ಬಾಲೆಸಂತಾಪದೊಳು ನೂಕಿ ಕಾಡುವವಿಧಿಗೆ ।
ಬಲ್ಲೆಯಾ ಸೋಲುವರು ದೇವದೇವಾದಿಗಳು ॥ ಪ ॥
ಭೂತಲವಪಾಲಿಸುವ । ಶಾಂತಮೂರುತಿಯ ಸಹ
ಕಾತರಿಪನ್ನೈ ದೈವ । ಗತಿಯ ಬಲೆಯೊಳು ಶಿಲುಕಿ ॥ ೧ ॥
ಸುಖಕಾಣೆ ನಾ ಜಗದಿ । ಸಖಿಯುಳಿಸರೀ ಫಣೆಯ
ಲಿಖಿತವನು ವಿರಹಾಗ್ನಿ । ಪ್ರಖರತಾಪವತಾಳಿ ॥ ೨ ॥

**ಚಿತ್ರರೇಖೆ:**—(ಆಶ್ಚರ್ಯದಿಂದ) ಕಮಲೇ! ಇದೇನು. ಹೀಗೇಕೆ ಮಾಡುವೆ? ಶಾಂತಳಾಗು, ನಾನೇನು ಬೇಕಂತೇ ಈ ಚಿತ್ರವನ್ನು ನಿನ್ನ

ಕೈಯಲ್ಲಿ ಕೊಟ್ಟವಳಲ್ಲ. ಈ ಸಾರೆ ದಯಮಾಡಿ ನನ್ನ ಅಪರಾಧವನ್ನು ಉಡಿಯಲ್ಲಿ ಹಾಕಿಕೊ, ನನ್ನನ್ನು ಕ್ಷಮಿಸು.

**ಕಮಲೆ:**— ನಿನ್ನನ್ನು ಕ್ಷಮಿಸಲು ನಾನೆಷ್ಟರವಳು. ಸಖೀ! ನಾನು ಮಂದಭಾಗ್ಯಳು. ದೈವವು ಜನರಿಗೆ ಅನುಕೂಲವಿಲ್ಲದಿದ್ದರೆ ಈ ಜಗತ್ತಿನಲ್ಲಿಯ ಯಾವ ಕೆಲಸವೂ ಅವರಿಗೆ ಸಾಧ್ಯವಾಗದು. ಚಿತ್ರರೇಖೇ! ಇಂದು ನಾನು ಆ ದುಷ್ಟನಾದ ಕುಮತಿಯನ್ನು ಲಗ್ನವಾಗಲು ಒಡಂಬಡದಿದ್ದರೆ, ನನ್ನ ತಂದೆಯು ಈ ದಿವಸ ರಾತ್ರಿ ಆ ನೀಚನೊಡನೆ ಇಲ್ಲಿಗೆ ಬಂದು, ನನ್ನ ಲಗ್ನವನ್ನು ಅವನೊಡನೆ ಬಲಾತ್ಕಾರದಿಂದ ಮಾಡುವುದನ್ನು ನಿಶ್ಚಯಿಸಿರುವನಂತೆ. ಈ ದಿವಸ ನನ್ನ ಮನೋಹರನು ಇಲ್ಲಿಗೆ ಬರುವುದಂತೂ ಸಂಭವವೇ ಇಲ್ಲ. ಆ ಅಧಮನ ಲಗ್ನವಾಗುವುದಕ್ಕಿಂತ ಎದೆಗೆ ಕಠಾರಿಯನ್ನು ಇರಿದುಕೊಂಡು ಸಾಯುವುದು ಬಹು ನೆಟ್ಟಗೆ. (ಎಂದು ಕಠಾರಿಯನ್ನು ಎತ್ತಿ ಎದೆಗೆ ಹೊಡೆದುಕೊಳ್ಳುವಷ್ಟರಲ್ಲಿ, ಕೋಕಿಲೆಯು ಓಡುತ್ತ ಬಂದು ಕಮಲೆಯ ಕೈ ಹಿಡಿದು) ಕಮಲೇ! ಹುಚ್ಚಿಯಂತೆ ಹೀಗೇಕೆ ಮಾಡುವಿ? ಕಠಾರಿಯನ್ನು ಕೆಳಗಿಡು. ನಿನ್ನ ಇಚ್ಛೆಯು ಪೂರ್ಣವಾಗುವ ಸಮಯವು ಸಮೀಪಿಸಿರಲು, ಈ ರೀತಿ ಆತ್ಮಹತ್ಯೆವನ್ನು ಮಾಡಿಕೊಳ್ಳುವುದೇ?

**ಕಮಲೆ:**— ಮತ್ತೇನು ಮಾಡಲಿ? ಆ ದುಷ್ಟನನ್ನು ಲಗ್ನವಾಗುವುದಕ್ಕಿಂತ ಮೃತ್ಯುದೇವತೆಯನ್ನು ಆಶ್ರಯಿಸುವುದೇ ಹೆಚ್ಚು ಹಿತಕರವು. ಯಾಕೆಂದರೆ,

**೪೩ ಪದ.** ಧಾಟಿ:— (**अवचित गेले किंकर करिमी**)

ಗರಲವುಕೇಳೆ ದುರ್ಜನರಿಹರೆ ।
ಕೊರಲಮಣಿಯೆ ಮಹೇಶಗೆ ಪ್ರಾಣವಹೀರುವ ವಿಷತಿಳಿ ।।ಪ।।
ಶೂಲತಾಪನಾ ತಾಳಲುಬಲ್ಲೆನೇ ।
ಕೇಳೇ ಕಾಳಾಹಿವೇಣಿಯೆನೀ ।
ಇಳೆಯಲಿ ಕೊಲ್ಲುವ ।
ಶೂಲವಿಹುದೆ ದುರುಳರ ಮನವದು ಸಖಿ ।। ೧ ।।

ಸಖೀ! ನನ್ನ ಪ್ರಾಣಪ್ರಿಯನು ಬರಲಿಲ್ಲವೇನು?

**ಕೋಕಿಲೆ:**—ಇದೇನು ಹೀಗೆ ಮಾತಾಡುವಿ? ನಿನ್ನ ಪ್ರಿಯನು ಬಂದಿರುವನು.

**ಕಮಲೆ:**—ಎಲ್ಲಿ; ಎಲ್ಲಿ. (ಎಂದು ಎದ್ದು ಗಾಬರಿಯಿಂದ ನಾಲ್ಕೂ ಕಡೆ ನೋಡುವಳು.)

**ಕೋಕಿಲೆ:**—ಪ್ರಿಯನು ಬರಲಿಲ್ಲ. ಅತ್ಯಂತ ವಿಶ್ವಾಸಾರ್ಹನಾದ ವಿಜಯನನ್ನು ಇಲ್ಲಿಗೆ ನಿನ್ನನ್ನು ಕರೆತರುವುದಕ್ಕೆ ಕಳುಹಿರುವನು.

**ಕಮಲೆ:**—(ಮುಗುಳು ನಗೆ ನಗುತ್ತ) ಹೀಗೇನು! (ಎಂದು ವಿಜಯನಿಗೆ) ಆಸನದ ಮೇಲೆ ಕುಳಿತುಕೊಳ್ಳಿ. ಚಿತ್ರರೇಖೇ! ಆ ಆಸನವನ್ನು ಸಿದ್ಧಪಡಿಸು.

**ವಿಜಯ**—(ಚಿತ್ರರೇಖೆಯ ಆದರವನ್ನು ನೋಡಿ.) ನಾನು ಇನ್ನೂ ಚಿಕ್ಕವನು. ನನಗೇಕೆ ಇಷ್ಟು ಆದರವು. (ಎಂದು ಆಸನವನ್ನು ಸರಿಸಿಕೊಂಡು ಕುಳಿತುಕೊಳ್ಳುವನು.)

**ಕೋಕಿಲೆ:**—(ರತ್ನಮಾಲೆಯನ್ನು ಮತ್ತು ಕಠಾರಿಯನ್ನು ಹೊರಗೆ ತೆಗೆದು ಕೈಯಲ್ಲಿ ಹಿಡಿದುಕೊಂಡು) ಸಖೀ! ನಿನ್ನ ಪ್ರಿಯನು ಈ ರತ್ನಮಾಲಿಕೆಯನ್ನೂ ಕಠಾರಿಯನ್ನೂ ನಿನ್ನ ಕೈಯಲ್ಲಿಯೇ ಕೊಡು ಎಂದು ಹೇಳಿದ್ದಾನೆ. ಇವುಗಳನ್ನು ಸ್ವೀಕರಿಸು.

**ಕಮಲೆ:**—ತಾ ಇಲ್ಲಿ. (ಎಂದು ಸ್ವೀಕರಿಸುವಳು.)

**ಕೋಕಿಲೆ:**—ಪ್ರೇಮದಿಂದ ಕಳಿಸಿದ ರತ್ನಮಾಲೆಯನ್ನು ಕೊರಳಲ್ಲಿ ಹಾಕಿಕೊ. ಕಮಲೇ! ಕಠಾರಿಯನ್ನು ಯಾಕೆ ಕಳುಹಿಸಿಕೊಟ್ಟಿದ್ದಾರಾದೀತೆ? ನನಗಂತೂ ಇದರ ಭಾವವೇ ತಿಳಿಯದಾಗಿದೆ.

**ಕಮಲೆ:**—(ನಗುತ್ತ) ಸಖೀ! ಕ್ಷತ್ರಿಯರ ಆದಿದೈವತವು ಶಸ್ತ್ರವಲ್ಲವೇ? ಅವರು ತಮ್ಮ ಮರ್ಯಾದೆಗೆ ಮತ್ತು ಶೌರ್ಯಕ್ಕೆ ತಕ್ಕ ವಸ್ತುಗಳನ್ನೇ ನನ್ನ ಕಡೆಗೆ ಕಳುಹಿಸಿದ್ದಾರೆ. ಇದರಲ್ಲಿ ಅವರದೇನು ಅನ್ಯಾಯವು? ನಾನಾದರೂ ನಮ್ಮ ಮಾನವನ್ನು ರಕ್ಷಿಸುವ ಈ ಶಸ್ತ್ರವನ್ನು ಬಹು ಎಚ್ಚರದಿಂದ ಕಾಪಾಡುವೆನು. ಸಖೀ! ನಿನ್ನ ಇಷ್ಟವಿದ್ದಂತೆ ಈ ರತ್ನಮಾಲಿಕೆಯನ್ನು ಕೊರಳಲ್ಲಿ ಹಾಕಿಕೊಳ್ಳುವೆನು. (ಎಂದು ಹಾಕಿಕೊಳ್ಳುವಳು.)

**ವಿಜಯ:**—(ತನ್ನೊಳಗೆ) ಗುಣವತಿಯರಿಗೆ ತಮ್ಮ ಪ್ರಿಯಕರರು ಕಳಿಸಿದ ಪದಾರ್ಥದಲ್ಲಿ ಈ ತೆರದ ಆದರವಿರುವುದು. (ಪ್ರಕಟವಾಗಿ) ದೇವಿ! ಇದು ಮಾತಾಡುತ್ತ ಕುಳಿತುಕೊಳ್ಳುವ ಸಮಯವಲ್ಲ. ಇಲ್ಲಿಂದ ಪಾರಾಗಿಹೋಗುವ ಹಂಚಿಕೆಯನ್ನು ಮೊದಲು ಮಾಡುವ. ಇಲ್ಲಿಯೇ ಕುಳಿತರೆ ನಮ್ಮ ಗತಿಯು ನೆಟ್ಟಗಾಗದು.

**ಕಮಲೆ:**— ಇಲ್ಲಿಂದ ನಾವು ಹೊರಗೆ ಹೋಗುವುದಾದರೂ ಹೇಗೆ?

**ವಿಜಯ:**— ತಾವು ನನ್ನೊಡನೆ ಬನ್ನಿರಿ. ಈ ಪಾದಸೇವಕನು ತಮ್ಮೆಲ್ಲರನ್ನು ಹೊರಗೆ ಕರೆದುಕೊಂಡು ಹೋಗುವನು.

**ಕಮಲೆ:**— ಇದಕ್ಕೆ ನಾನು ಒಪ್ಪಲಾರೆನು. ನಾವೆಲ್ಲರು ಇಲ್ಲಿಂದ ಹೊರಟು ಹೋದರೆ ನನ್ನ ತಂದೆಯು ಸಿಟ್ಟಿಗೆದ್ದು ಇಲ್ಲಿಯ ಕಾವಲುಗಾರರನ್ನು ಕೊಲ್ಲಿಸದೆ ಬಿಡನು. ಇದಲ್ಲದೆ ನನ್ನ ಪ್ರಾಣಪ್ರಿಯನ ಮೇಲೆ ಸಹ ಕಠಿಣ ಪ್ರಸಂಗವು ಬರಬಹುದು.

**ಕೋಕಿಲೆ:**— ನಾನು ಒಬ್ಬಳೇ ಇಲ್ಲಿದ್ದುಕೊಂಡು ಏನೂ ಕಠಿಣ ಪ್ರಸಂಗ ಬಾರದಂತೆ ನೋಡಿಕೊಳ್ಳುವೆನು. ಕಮಲೇ! ನನ್ನ ವಿಷಯವಾಗಿ ಚಿಂತಿಸಬೇಡ.

**ಕಮಲೆ:**— ಸಖಿಯೇ! ನೀನು ಹೇಳುವುದು ಯೋಗ್ಯವು. ನನ್ನ ಜೀವದಕಿಂತಲೂ ಪ್ರಿಯಳಾದ ನಿನ್ನನ್ನು ಇಲ್ಲಿಯೇ ಬಿಟ್ಟು ನಾನು ಅಲ್ಲಿಗೆ ಹೋಗುವುದು ಹೇಗೆ? ನಿನ್ನಂತಹ ಗೆಳತಿಯನ್ನು ಸಂಕಟದಲ್ಲಿ ದೂಡಿ ನಾನು ಇಲ್ಲಿಂದ ಹೋದರೆ ಗುಣಶೋಧನವನ್ನು ಮಾಡುವ ಶ್ರೀಹರಿಯು ಮೆಚ್ಚುವನೇ? ನಿಮ್ಮೆಲ್ಲರನ್ನು ದುಃಖಕ್ಕೆ ಗುರಿಮಾಡಿ ನಾನು ಸುಖಪಡವುದಕ್ಕಿಂತ ನಾನೇ ಸತ್ತುಹೋದರೆ ನೀವಾದರೂ ಸುಖದಿಂದ ಇರುವಿರಿ. ಬಾಲಕಾ! ನಾನು ಸಖಿಯರನ್ನು ಬಿಟ್ಟು ಅಲ್ಲಿಗೆ ಬರಲಾರೆನು.

**ವಿಜಯ:**— ದೇವಿ! ತಮ್ಮ ಇಷ್ಟವಿದ್ದಂತೆಯಾಗಲಿ. ವಿಚಾರಮಾಡುತ್ತ ಕುಳಿತರೆ ಕಾರ್ಯವು ಕೆಟ್ಟು ಹೋಗುವುದು. ಆ ಕ್ಷತ್ರಿಯ ಕುಲತಿಲಕನಾದ ಹಂಸರಾಜ ಪ್ರಭುವಿನ ಪರಾಕ್ರಮವು ತಮಗೆ ಗೊತ್ತಿಲ್ಲವೇನು? ಈಗಂತೂ ನಾವೆಲ್ಲರು ಇಲ್ಲಿಂದ ಹೊರಟು ಹೋಗುವ. ಮುಂದೆ ಎಂಥ ಕಠಿಣ ಪ್ರಸಂಗಬಂದರೂ ನಮ್ಮ ಪ್ರಭುವಾದ ಹಂಸರಾಜನು ನಮ್ಮನ್ನು ಕಾಯಲು

ಸಮರ್ಥನಿರುವನು. ದುಃಖಿಸುತ್ತ ಕುಳಿತುಕೊಳ್ಳುವುದು ಕ್ಷತ್ರಿಯರಿಗೆ ಸಲ್ಲದು. ಇಲ್ಲಿಂದ ಆದಷ್ಟು ತೀವ್ರ ಹೊರಡುವ. ನಾನು ಹುಡುಗನೆಂದು ತಿಳಿಯಬೇಡಿ. ಪೂರ್ವಾಪರವನ್ನೆಲ್ಲಾ ವಿಚಾರಮಾಡಿ ತಮ್ಮನ್ನು ಕರೆತರಲು ಹಂಸರಾಜನು ನನ್ನನ್ನು ಇಲ್ಲಿಗೆ ಕಳುಹಿಸಿರುವನು. ಈ ಹಗ್ಗದ ಸಹಾಯದಿಂದ ನೀವೆಲ್ಲರು ಈ ದುರ್ಗವನ್ನು ಹತ್ತಿರಿ. ನಾನು ಹೊರಗಿನವರು ಒಳಗೆ ಬಾರದಂತೆಯೂ ಒಳಗಿನವರು ಹೊರಗೆ ಹೋಗದಂತೆಯೂ ಹತ್ತಿರವಿರುವ ಈ ಮದ್ದಿನ ಮನೆಗೆ ಕೊಳ್ಳಿಯನ್ನು ಹತ್ತಿಸಿ ಬರುವೆನು.

**ಕಮಲೆ:**— ಹಾಗೇ ಆಗಲಿ. (ಎಂದು ತನ್ನ ಸಖಿಯರೊಡನೆ ದುರ್ಗವನ್ನೇರುವಳು. ವಿಜಯನು ಮದ್ದಿನ ಮನೆಗೆ ಕೊಳ್ಳಿಯನ್ನು ಕೊಟ್ಟು ಕಿಲ್ಲೆಯನ್ನೇರುವನು. ಎಲ್ಲರೂ ಕಿಲ್ಲೆಯನ್ನೇರಿದ ಮೇಲೆ ಅದರ ಹಿಂಭಾಗಕ್ಕೆ ಬರುವರು.)

**ಕಮಲೆ:**— ಅಹಾಹಾ! ಏನು ಸದೈವವಿದು. ನಿಶಾದೇವಿಯ ದಯದಿಂದಲೂ ನಿನ್ನ ಸಾಹಸದಿಂದಲೂ ದುರ್ಗವನ್ನಂತೂ ಸುಖರೂಪವಾಗಿ ಇಳಿದು ಬಂದೆವು. ವಿಜಯಾ! ಇಲ್ಲಿಗೆ ಬರುವಾಗ ನಮ್ಮನ್ನು ಯಾರಾದರು ಕಂಡರೇ ಹೇಗೆ?

**ವಿಜಯ:**— ಛೆ! ಛೆ! ಹಾಗೆಂದಿಗೂ ಆಗದು. ಈ ಚರಣದಾಸನು ನಿಮ್ಮ ಬೆಂಬಲವಾಗಿದ್ದದ್ದನ್ನು ಮರೆತರಾ? ಅದಿರಲಿ, ಬೇಗನೇ ಇಲ್ಲಿಂದ ಹೋಗುವ. (ಎನ್ನಲು ಎಲ್ಲರೂ ಅವನ ಹಿಂದೆ ಹೋಗುವರು.)



## ೨ ನೆಯ ಪ್ರವೇಶವು.



### ಸ್ಥಳ:— ದುರ್ಗದ ಕಡೆಗೆ ಬರುವ ಹಾದಿಯು.

ಪಾತ್ರಗಳು:— **ಚಂದ್ರಶೇಖರ, ಕುಮತಿ ಮತ್ತು ವಿಚಿತ್ರಸೇನ.**

ಬರುವ ರೀತಿಯು:— (ಚಂದ್ರಶೇಖರನು ಉತ್ತಮ ಉಡುಪುಗಳನ್ನು ಧರಿಸಿಧ ಕುಮತಿಯ ಹೆಗಲ ಮೇಲೆ ತನ್ನ ಕೈಇಟ್ಟುಕೊಂಡು ನಗುತ್ತ ಪ್ರವೇಶಮಾಡುವನು. ಸಂಗಡ ವಿಚಿತ್ರಸೇನನೂ ಇರುವನು.)

**ಚಂದ್ರಶೇಖರ:**— ಇಂದು ನಿನ್ನ ಮನೋರಥವು ಕೈಗೂಡುವುದೆಂದು ತಿಳಿ.

**ಕುಮತಿ:**— ನಿನ್ನಂಥ ಜೀವದ ಗೆಳೆಯನಿದ್ದ ಮೇಲೆ ನನಗೇನು ಕಡಮೆ?

**ಚಂದ್ರಶೇಖರ:**— ಸಖನೇ! ದುರ್ಗದ ಕಡೆಗೆ ಹೋಗುವ, ನಡೆ. ಇಂದು ಕಮಲೆಯು ನಿನ್ನ ಅನಾದರವನ್ನು ಹೇಗೆ ಮಾಡುತ್ತಾಳೆ ನೋಡುವ. (ಎಂದು ಇಬ್ಬರು ಮುಂದೆ ಹೋಗುವಷ್ಟರಲ್ಲಿ ಸೇನಾಧೀಶನು ಮುಂದಕ್ಕೆ ಬಂದು)

**ಸೇನಾಧೀಶ:**— ಪ್ರಭುಗಳೇ! ಘಾತವಾಯಿತು.

**ಚಂದ್ರಶೇಖರ:**— ಕಮಲೆಯು ಆತ್ಮಹತ್ಯವನ್ನು ಮಾಡಿಕೊಂಡಳೇನು?

**ಸೇನಾಧೀಶ:**— ಇಲ್ಲ.

**ಚಂದ್ರಶೇಖರ:**— ಹಾಗಾದರೆ ಏನಾಯಿತು? ಹೇಳು.

**ಸೇನಾಧೀಶ:**— ಹಂಸರಾಜರ ಕಡೆಯಿಂದ ಬಂದ ಒಬ್ಬ ಬಾಲಕನು ನಮಗೆ ತಿಳಿಯದ ಹಾಗೆ ದುರ್ಗದೊಳಗೆ ಪ್ರವೇಶಮಾಡಿ, ಕಮಲಾದೇವಿಯರ ಸಹಿತ ದುರ್ಗವನ್ನಿಳಿದು, ಮಾಲತೀವನದ ಕಡೆಗೆ ಹೋದನು. ಇದಲ್ಲದೆ ಆ ನೀಚನು ತಾನು ಹೋದ ಕಡೆಗೆ ಯಾರೂ ಬರಬಾರದೆಂದು ಅಲ್ಲಿಯೇ ಹತ್ತಿರ ಇರುವ ಮದ್ದಿನ ಮನೆಗೆ ಕೊಳ್ಳಿಯನ್ನು ಹತ್ತಿಸಿ ಹೋದನು. ಪ್ರಭುಗಳೇ! ಆ ಹತ್ತಿದ ಉರಿಯನ್ನು ಆರಿಸಿ, ಅವರು ಹೋಗುತ್ತಿರುವ ಮಾರ್ಗವನ್ನು ಶೋಧಿಸಲು ನಮಗೆ ಬಹು ಪ್ರಯಾಸವು ಆಯಿತು. ಈಗ ದೇವಿಯರು ಹಂಸರಾಜರನ್ನು ಸಮೀಪಿಸಿರಬಹುದು.

**ಚಂದ್ರಶೇಖರ:**— (ಸಿಟ್ಟಿನಿಂದ) ಸಾಕು. ಸಾಕು. ಇನ್ನು ಮುಂದೆ ಮಾತಾಡಬೇಡ. ಬಲಸಿಂಹಾ! ಇಷ್ಟೆಲ್ಲ ಆಗುವ ವರೆಗೆ ನೀನು ಕಣ್ಣು ಮುಚ್ಚಿಕೊಂಡು ಕುಳಿತಿದ್ದೆಯಾ? ಅಲ್ಲಿಯ ಕಾವುಲುಗಾರರೆಲ್ಲರು ಸತ್ತಿದ್ದರೋ ಅಥವಾ ಮಲಗಿದ್ದರೋ? ಹೇಳು. ಆ ಚಿಕ್ಕ ಬಾಲಕನನ್ನು ತಡೆಯುವಷ್ಟು ಶಕ್ತಿಯು ಸಹ ನಿಮ್ಮಲ್ಲಿ ಇಲ್ಲದಂತಾಯಿತೇ? ಹೇಡಿಯೇ! ನನ್ನ ಮುಂದೆ ನಿಲ್ಲಬೇಡ. ಇನ್ನಾದರೂ ನಿನ್ನ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ನಡೆ. ನಾವೂ ಅತ್ತ ಕಡೆಗೆ ಬರುವೆವು.

**ಸೇನಾಧೀಶ:**— ಅಪ್ಪಣೆ. (ಎಂದು ಹೊರಟು ಹೋಗುವನು.)

**ಕುಮತಿ:**— ಮಿತ್ರಾ! ವೀರನಾದ ಹಂಸರಾಜನ ಆಶ್ರಯವನ್ನು ಹೊಂದಿದ ಕಮಲೆಯು ನಮ್ಮ ವಶವಾಗುವ ಬಗೆ ಹೇಗೆ?

**ಚಂದ್ರಶೇಖರ:**— ಕುಮತಿಯೇ! ಹಂಸನು ಕಮಲೆಯು ತನ್ನನ್ನು ಸೇರಿದಳೆಂದು ಹಿಗ್ಗುವಂತಿಲ್ಲ. ಅವನು ತನ್ನ ಮರಣವು ಸಮೀಪಿಸಿರುವುದೆಂದು ತಿಳಿಯತಕ್ಕದ್ದು. ಒಂದು ವೇಳೆ ನನ್ನ ಮಗಳಿಗೆ ದುಃಖವಾದರೂ ಚಿಂತೆಯಿಲ್ಲ. ನಾನು ಆ ಅಧಮನನ್ನು ಕೊಂದು ಅವನ ಶಿರವನ್ನು ನನ್ನ ನಗರದಲ್ಲಿಯೂ ಅವನ ನಗರದಲ್ಲಿಯೂ ಮೆರೆಸುವೆನು ತಿಳಿ.

**ಕುಮತಿ:**— ಮಿತ್ರಾ! ಆ ಹೇಡಿಗೆ ಹೆದರುವುದೇಕೆ? ನಾನೂ ನಿನ್ನೊಡನೆ ಮಾಲತೀವನಕ್ಕೆ ಬರುವೆನು. ಆ ಹಂಸನಿಗೆ ಇನ್ನೂ ನನ್ನ ಬಾಹುಶಕ್ತಿಯು ಗೊತ್ತಿಲ್ಲವೆಂಬಂತೆ ಕಾಣುವುದು.

**ಚಂದ್ರಶೇಖರ:**— ವಿಚಿತ್ರಸೇನಾ! ನಾನು ಬರುವವರೆಗೂ ನನ್ನ ಹಾದಿಯನ್ನು ನೋಡುತ್ತಾ ಇಲ್ಲಿಯೇ ಅರಮನೆಯಲ್ಲಿ ಇರು. ಒಳ್ಳೇದು, ಮಿತ್ರಾ! ಬಾ, ಇನ್ನು ವಿಲಂಬಮಾಡಿ ಉಪಯೋಗವಿಲ್ಲ. (ಎಂದು ಕುಮತಿಯೊಡನೆ ಹೊರಟು ಹೋಗುವನು.)

**ವಿಚಿತ್ರಸೇನ:**— ಅಪ್ಪಣೆ. (ವಿಚಿತ್ರಸೇನನು ಅರಮನೆಯ ಕಡೆಗೆ ಹೋಗುವನು.)

## ೩ನೆಯ ಪ್ರವೇಶವು.

ಸ್ಥಳ:— ಮಾಲತೀವನದ ಹತ್ತಿರ ಇರುವ ಹಾದಿಯು.

ಪಾತ್ರಗಳು:— **ಹಂಸರಾಜ ಮತ್ತು ವೀರಸೇನ.**

ಬರುವ ರೀತಿಯು:— (ಇಬ್ಬರು ಆಯುಧಗಳ ಸಹಿತ ಮರದ ಕೆಳಗೆ ನಿಂತು ನಾಲ್ಕೂ ಕಡೆ ನೋಡುತ್ತಿರುವರು.)

**ಹಂಸರಾಜ:**— ವೀರಸೇನಾ! ಈ ಆಕಾಶಮಾರ್ಗದಲ್ಲಿ ರಾಜಿಸುವ ನಕ್ಷತ್ರಗಳ ಸ್ಥಿತಿಯನ್ನು ನೋಡು. ಇವು ಉಷಾದೇವಿಯ ಕಾಂತೆಯ

ಮುಂದೆ ತಮ್ಮ ಕಾಂತೆಯು ಬೀಳಲಾರದೆಂದು ನಾಚಿ ಅಡಗಹತ್ತಿವೆ. ಆದರೂ ಈ ಚಂದ್ರಿಕೆಯ ಕಾಂತೆಯು ಕುಂದಿದಂತೆ ಕಾಣುವುದಿಲ್ಲ, ಮಿತ್ರಾ!

**೪೪ ಪದ.** ಧಾಟಿ:—(ಮನುಜಾ ಸುಗುಣಿ.)

ಚಂದ್ರಿಕಾದೇವಿಯು ಬೀರುತಾ ಮೋದಾ ಧವಲಾಂಗದಿ ಮನಕೆ।
ನಂದವನೀಯುತಾ ತಾರಾಮಾರ್ಗದಿ ಶೋಭಿಪಳ್ಳೆ ॥ ಪ ॥
ಮುದ್ದುಮೊಗದಿ ಬಹು ರಂಜಿಪಾಯಿೂ ಜ್ಯೋತ್ಸ್ನಾದೇವಿಯಳೆ।
ಮೇಧಾವಿಯ ತಲದಿತಾ ಬಳಲುವಾ ನಾನಾ ಜನರ।
ಬಾಧೆಯ ತಾನೇ ಬಿಡದೆ ನೀಗುತಾ ಮೆರೆವಳ್ಳೆಯ್ಯಾ।
ಮುದ್ದಾದರು ತಾ ಕಡು ವೈರಿಯೇ ವಿರಹಿಗೂ ಚೋರಗೂ॥೧॥

**ವೀರಸೇನ:**—ನೀನು ಹೇಳಿದಂತೆ ಈ ಚಂದ್ರಿಕೆಯು ಕಾಂತಿಯದೆ. ಆದರೂ ಇವಳ ಪ್ರಕಾಶವು ಬಹಳ ಹೊತ್ತಿನ ವರೆಗೆ ನಿಲ್ಲಲಾರದು. ಇತ್ತಕಡೆ ನೋಡು. ನಾವು ಮಾತುಮಾತಾಡುವಷ್ಟರಲ್ಲಿ ಉಷಾದೇವತೆಯ ಕಾಂತಿಯು ಹೆಚ್ಚುತ್ತ ನಡೆದು ಚಂದ್ರಿಕೆಯ ತೇಜವು ಕುಂದುತ್ತ ನಡೆದಿದೆ. ಒಳ್ಳೇದು, ಮಿತ್ರಾ! ಕಮಲಾದೇವಿಯನ್ನು ಕರೆದುಕೊಂಡು ಬರುವುದಕ್ಕೆ ದುರ್ಗದ ಕಡೆಗೆ ಹೋದ ವಿಜಯನು ಇನ್ನೂ ಇಲ್ಲಿಗೆ ಏಕೆ ಬಂದಿರಲಿಕ್ಕಿಲ್ಲ?

**ಹಂಸರಾಜ:**—ಅವನೂ ಸೆರೆಬಿದ್ದಿರ ಬಹುದು.

**ವಿರಸೇನ:**—ಗೆಳೆಯನೇ! ಹಾಗೆ ಯೋಚಿಸಕೂಡದು. ವಿಜಯನು ಹುಲಿಯೇ ಎಂದು ತಿಳಿ. ಅವನು ಕಾರ್ಯವನ್ನು ಸಾಧಿಸಿಕೊಂಡು ಬಂದೇ ಬರುವನು. (ಹಾಗೆ ಸ್ವಲ್ಪ ಹೊತ್ತು ಸುಮ್ಮನಿದ್ದು, ಮಂಜುಳ ಸಪ್ಪಳವನ್ನು ಕೇಳಿ,) ಮಿತ್ರಾ! ಅದೇನೋ ಶಬ್ದ ಕೇಳಿಸುತ್ತಿದೆ. ಏನಿರಬಹುದು?

**ಹಂಸರಾಜ:**—ನೂಪುರದ ಸಪ್ಪಳದಂತೆ ಕೇಳಬರುತ್ತದೆ. (ಬಲಭುಜವು ಹಾರುವುದನ್ನು ನೋಡಿ) ಮಿತ್ರಾ! ಬಲಭುಜವು ಹಾರುತ್ತಿದೆ ನೋಡು. ಇದು ಶುಭಶಕುನವೋ, ಅಪಶಕುನವೋ?

**ವೀರಸೇನ:**— ಬಲಭುಜವು ಹಾರಿದರೆ ಒಳ್ಳೇದು. ಇದು ಕೂಡಲೇ ಆಗುವ ಶುಭಕಾರ್ಯದ ಸೂಚನೆಯು ಎಂದು ತಿಳಿ.

**ಹಂಸರಾಜ:**— ಹೀಗೊ!! (ಎಂದು ತೆರೆಯಲ್ಲಿ ವಿಜಯನು: "ದೇವೀ! ಇದೇ ವನದಲ್ಲಿ ಹಂಸರಾಜರಿರುವರು. ಬೇಗನೇ ನಡೆಯಿರಿನ್ನು" ಎಂಬುದನ್ನು ಕೇಳಿ ನಗುತ್ತ ಮಿತ್ರಾ! ಬಾಲಕನಾದ ವಿಜಯನ ಮಧುರ ಸ್ವರವು ಕೇಳಬರುತ್ತಿದೆ. ಇತ್ತಕಡೆ ನೋಡು ವಿಜಯನು ಬರುತ್ತಿರುವನು. ಅವನ ಸಂಗಡ ಮೂರು ಜನ ಸುಂದರ ಕನ್ಯಕೆಯರು ಇತ್ತಕಡೆಯೇ ಬರುವರು.

**ವೀರಸೇನ:**— ಈ ಮೂವರಲ್ಲಿ ನಿನ್ನ ಪ್ರಿಯಳು ಯಾರು? (ಮಾತಾಡದಿರುವುದನ್ನು ಕಂಡು) ನಾಚಬೇಡ. ಹೇಳು.

**ಹಂಸರಾಜ:**— ಒಂದು ಕೈಯಲ್ಲಿ ಹೂವಿನ ಮಾಲೆಯನ್ನು ಮತ್ತೊಂದು ಕೈಯಲ್ಲಿ ಬಾಣವನ್ನು ಹಿಡಿದುಕೊಂಡು ಮುಗುಳು ನಗೆ ನಗುತ್ತ ಮಧ್ಯದಲ್ಲಿ ಬರುವ ಮದಗಜಗಮನೆಯೇ ಎನ್ನ ಪ್ರಿಯಳು. ಮಿತ್ರಾ! ನಾವು ಮರೆಗೆ ನಿಂತರೆ ಎಲ್ಲವೂ ತಿಳಿಯುವುದು.

**ವೀರಸೇನ:**— ನಿನ್ನ ಇಷ್ಟವಿದ್ದಂತೆಯಾಗಲಿ. (ಎಂದು ಇಬ್ಬರೂ ಗಿಡದ ಮರೆಗೆ ಹೋಗಿ, ಅಲ್ಲಿ ನಿಂತುಕೊಳ್ಳುವರು.)

---

## ೪ನೆಯ ಪ್ರವೇಶವು.

### ಸ್ಥಳ:— ಮಾಲತೀವನವು.

ಪಾತ್ರಗಳು:—**ಕಮಲೆ, ಚಿತ್ರರೇಖೆ, ಕೋಕಿಲೆ, ವಿಜಯ, ಹಂಸರಾಜ, ವೀರಸೇನ, ಸರದಾರರು, ಕುಮತಿರಾಜ ಮತ್ತು ಚಂದ್ರಶೇಖರನು.**

ಬರುವ ರೀತಿಯು:— (ಕಮಲೆಯು ತನ್ನ ಸಖಿಯರೊಡನೆ ಪ್ರವೇಶಮಾಡುವಳು. ಕಮಲೆಯ ಒಂದು ಕೈಯಲ್ಲಿ ಬಾಣವೂ ಮತ್ತೊಂದು ಕೈಯಲ್ಲಿ ಹೂವಿನ ಮಾಲೆಯೂ ಇರಬೇಕು. ವಿಜಯನು ತನ್ನ ಆಯುಧ ಸಹಿತವಾಗಿ ಕಮಲೆಯ ಹತ್ತಿರದಿಂದಲೇ ಬರಬೇಕು.)

---

**ಕಮಲೆ:**—(ಪ್ರವೇಶಮಾಡಿ) ಸಖಿಯರೇ! ಈಗ ವನದಲ್ಲಿ ವಸಂತರಾಜನ ಸಂಚಾರವಿದ್ದುದರಿಂದ ವನದೇವತೆಯು ಹೆಚ್ಚು ಶೃಂಗಾರಳಾಗಿದ್ದಾಳೆ.

ಎಲ್ಲಿ ನೋಡಿದರೂ ಹೂವುಗಳು ಅರಳಿರುವುದಲ್ಲದೆ ಪ್ರೇಕ್ಷಕರ ಮನಸ್ಸನ್ನು ಆನಂದಗೊಳಿಸುವುವು. ಅಹಾಹಾ!!

**೪೫ ಪದ. ಧಾಟಿ:—(व्यर्थ अम्ही अबलां)**

ರಾಜಿಪುದೀವನವು । ರಾಜೀವ ಮುಖಿಯೆ ॥ ಪ ॥
ಈಯುವನೀವನ ಸುಖವನು ನೋಡೆ ।
ವಾಯು ಪರಾಗದಿತಾ ॥ ೧ ॥
ಆರಿಸುತೀ ಪೂಗಳ ತುಂಬುವನೆ ।
ಮಾರನು ಮೂಡಿಗೆಯಾ ॥ ೨ ॥
ನರರಾರೀ ವನದೊಳಗಿದ್ದರೂ ಸಖಿ ।
ಇರಿಯದೆ ಬಿಡಕಾಮಾ ॥ ೩ ॥

**ಚಿತ್ರರೇಖೆ:**—(ಕಮಲೆಯ ಎದುರಿಗೆ ಬಂದು) ಕಮಲೇ! ಬೆಳಗಾಯಿತು. ಇನ್ನು ನಾವು ಯಾರಿಗೂ ಹೆದರುವ ಕಾರಣವಿಲ್ಲ. ಹಂಸನಿರುವನು.

**ಕಮಲೆ**:–(ಕಂಪಿಸಿ) ಹಂಸನೆಲ್ಲಿ? (ಎಂದು ಎಲ್ಲಕಡೆಗೂ ನೋಡುವಳು.)

**ಚಿತ್ರರೇಖೆ:**—ಹಂಸನು ಈ ಪುಷ್ಕರಣಿಯಲ್ಲಿ ಬೆಳೆದ ಕಮಲಿನಿಯ ಕಡೆಗೆ ಎಷ್ಟು ಆದರದಿಂದ ಓಡಿಹೋಗುವನು, ನೋಡು.

**ಕಮಲೆ:**—ಚೇಷ್ಟೆಯನ್ನು ಮಾಡಬೇಡ. ಸುಮ್ಮನೆ ಕುಳಿತುಕೊಳ್ಳಬಾರದೆ?

**ಚಿತ್ರರೇಖೆ:**—ನಾನು ನಿಜವಿದ್ದುದನ್ನೇ ನಿನಗೆ ತೋರಿಸಿದೆನಲ್ಲ. ಚೇಷ್ಟೆಯನ್ನೆಲ್ಲಿ ಮಾಡಿರುವೆನು?

**ಕೋಕಿಲೆ:**—ಚಿತ್ರರೇಖೆಯೇ! ಹಂಸನು ಕಮಲದ ಕಡೆಗೆ ಧಾವಿಸಿ ಹೋದಂತೆ ತನ್ನ ಮಾನಸಹಂಸನು ತನ್ನ ಕಡೆಗೆ ಓಡುತ್ತ ಬರಲಿಲ್ಲವೆಂದು ಸಿಟ್ಟಿಗೆದ್ದಿರುವಳು. ಇದರಲ್ಲಿ ಅವಳದೇನು ಅನ್ಯಾಯವು?

**ಚಿತ್ರರೇಖೆ:**—ಹೀಗೇನು!! ನನಗೇನು ಗೊತ್ತು. (ಎಂದು ಸುಮ್ಮಗಾಗುವಳು.)

**ಕಮಲೆ:**— ನಾನು ಆ ದುಷ್ಟ ಕಾಮನ ತಾಪವನ್ನು ತಾಳಲಾರೆನು. ಇದನ್ನು ತಿಳಿದೂ ನೀವು ನನ್ನನ್ನು ಕಾಡಿ ಸಂತೋಷಬಡುವಿರಿ.

**ವಿಜಯ:**—(ಮುಂದಕ್ಕೆ ಬಂದು) ನಿಮಗೆ ಅಷ್ಟು ತಾಪವನ್ನು ಕೊಡುವ ದುಷ್ಟನಾದ ಕಾಮನೆಲ್ಲಿರುವನು? ನಾನು ಆ ನೀಚನನ್ನು ಕಡಿದು ತುಂಡು ತುಂಡುಮಾಡಿ ಚಲ್ಲುವೆನು. ನನ್ನೆದುರಿಗೆ ಅವನ ಆಟವು ಸಾಗದು, ತಿಳಿದಿರಲಿ. (ಎಂದು ಒರೆಯಿಂದ ಖಡ್ಗವನ್ನು ತೆಗೆದು ಆವೇಶದಿಂದ) ಎಲೈ! ಅಧಮಾಧಮಾ! ದುರುಳಾ! ಮದಾಂಧಾ! ಸ್ತ್ರೀಯರ ಮೇಲೆ ಕೈ ಎತ್ತಲು ನಿನಗೆ ನಾಚಿಕೆಯು ಹೇಗೆ ಬರುವುದಿಲ್ಲವೋ? ಬಾ, ನನ್ನೊಡನೆ ಸಮರಾಂಗಣದಲ್ಲಿ ನಿಲ್ಲು. ಎಂದರೆ ನನ್ನ ಸಾಹಸವು ನಿನಗೆ ತಿಳಿಯುವುದು. ಕಳ್ಳನಂತೆ ಹೀಗೆ ಅಡಗಿಕೊಂಡು ಕುಳಿತುಕೊಳ್ಳಬೇಡ. ದೇವಿ! ಆ ನೀಚನು ಎಲ್ಲಿರುವನು? ಹೇಳಿರಿ. ಅವನನ್ನು ಕೊಂದಮೇಲೆಯೇ ನಾನು ಶಾಂತನಾಗುವೆನು. ತಮ್ಮನ್ನು ಈ ಸ್ಥಿತಿಗೆ ತಂದ ದುರುಳನನ್ನು ಕೊಲ್ಲದೆ ಬಿಡುವೆನೆ? (ಎಂದು ಅತ್ತಿತ್ತ ಅಡ್ಡಾಡಿ) ಎಲ್ಲಿರುವನು ಆ ಕಳ್ಳನು? ಹೇಳಿರಿ.

**ಕಮಲೆ:**— ವಿಜಯಾ! ಕಾಮನನ್ನು ಕೊಲ್ಲುವುದು ನಿನ್ನ ಕಡಿಂದ ಹೇಗಾದೀತು? ಅವನಿಗೆ ದೇಹವಿಲ್ಲ. ನಿನಗೆ ಕಾಮನ ಅತುಲಬಲವು ತಿಳಿಯದು.

**ವಿಜಯ:**— ಅದು ಹಾಗಿರಲಿ. ಈ ವನವು ಅರಮನೆಯಿಂದ ಬಹು ದೂರವಾಗಿದೆ. ಕುಮತಿರಾಜನು ಇಲ್ಲಿಯ ವರೆಗೆ ಧಾವಿಸುತ್ತ ಬಂದು, ನನ್ನನ್ನು ಕೊಂದು, ತಮ್ಮನ್ನು ಬಲಾತ್ಕಾರದಿಂದ ಹಿಡಿದು, ತನ್ನ ರಥದಲ್ಲಿ ಕುಳ್ಳಿರಿಸಿ ಕೊಂಡು ಹೋದರೆ ನೀವು ಏನು ಮಾಡುತ್ತೀರಿ?

**ಕಮಲೆ:**— ವಿಜಯಾ! ಕ್ಷತ್ರಿಯ ಕನ್ಯಕೆಯ ತೇಜವು ನಿನಗೆ ಗೊತ್ತಿಲ್ಲವೇನು? ನಾನು ಅಬಲೆಯು, ನನ್ನಿಂದೇನಾದೀತೆಂದು ತಿಳಿದುಕೊಳ್ಳಬೇಡ. ನಾನು ಆದಷ್ಟು ಸಾಹಸಮಾಡಿ ಅವನನ್ನು ಕೊಲ್ಲಲು ಪ್ರಯತ್ನ ಮಾಡುತ್ತೇನೆ. ಒಂದು ವೇಳೆ ನನ್ನ ದುರ್ದೈವದಿಂದ ಅವನ ಬಲವು ಹೆಚ್ಚಾದರೆ ನಾನು ನನ್ನ ಶಿರವನ್ನು ಈ ಕಠಾರಿಗೆ ಆಹುತಿಯಾಗಿ ಕೊಡುವೆನು. (ಆವೇಶದಿಂದ) ನಾನು ಜೀವದಿಂದ ಇರುವ ವರೆಗೂ ನನ್ನ ರಕ್ತವಾಹಿನಿಗಳಲ್ಲಿ ಉಚ್ಚ

ಕುಲದ ಕ್ಷತ್ರಿಯರ ರಕ್ತವು ಹರಿದಾಡುವ ವರೆಗೂ ಆ ದುಷ್ಟನು ನನ್ನನ್ನು ಮುಟ್ಟಲಾರನು. ಈ ದೇಹದ ಮೇಲೆ ಪೂರ್ಣ ಅಧಿಕಾರವು ಸೂರ್ಯ ಕುಲತಿಲಕರಾದ ಹಂಸರಾಜರದೇ ಇರುವುದು.

**ಹಂಸರಾಜ:**—(ಮುಂದಕ್ಕೆ ಬಂದು ತನ್ನೊಳಗೆ) ಆಹಾಹಾ! ಎಂಥ ಕ್ಷಾತ್ರತೇಜವಿದು!! ಇವಳು ಕನ್ಯಕೆಯಲ್ಲ. ನಮ್ಮ ಕ್ಷತ್ರಿಯ ಕುಲವನ್ನು ಉದ್ಧರಿಸಲು ದೇವತೆಯೇ ಸ್ವರ್ಗಲೋಕದಿಂದ ಇಲ್ಲಿಗೆ ಬಂದಂತೆ ಕಾಣುವುದು. ಇಂಥ ಸೌಂದರ್ಯವೂ, ತೇಜವೂ ಭೂಲೋಕದ ಸುಂದರಿಯರಿಗೆ ಹೇಗೆ ಪ್ರಾಪ್ತವಾದೀತು? ಇಂಥ ಗುಣಿಯು ನನ್ನನ್ನು ವರಿಸುವಳೆಂದ ಮೇಲೆ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲ. (ಎಂದು ಗಿಡದ ಮರೆಗೆ ಹೋಗಿ ನಿಲ್ಲುವನು.)

**ಕೋಕಿಲೆ:**—(ಮುಂದಕ್ಕೆ ಬಂದು) ಈ ಪ್ರತಾಪ ಹಾಗಿರಲಿ. ನಿನ್ನ ಸಾಮರ್ಥ್ಯವನ್ನು ನೋಡುವೆನು. ಅಗೋ!! ಆ ಪುಷ್ಕರಣೆಯಲ್ಲಿರುವ ಹಂಸ ವನ್ನು ಹಿಡಿ.

**ಕಮಲೆ:**—ಅದೇ ನನ್ನ ಹತ್ತಿರ ಬಂದರೆ ಹಿಡಿಯುವೆನು.

**ಹಂಸರಾಜ:**—(ಮುಂದಕ್ಕೆ ಬಂದು ತನ್ನೊಳಗೆ) ಇದೇ ಸಮಯವು ಪ್ರಿಯಳೆದುರಿಗೆ ಹೋಗಲು ಯೋಗ್ಯವು (ಎಂದು ಮುಂದಕ್ಕೆ ಹೋಗಿ ನಿಲ್ಲು ವನು. ಕಮಲೆಯು ನಾಚಿ ಹಿಂದಕ್ಕೆ ಸರಿಯುವಳು.)

**೪೬ ಪದ.** ಧಾಟಿ:—(ಬಂದೆ ಕಾಮಿನಿ ಮಣಿಯೆ)

ಬಂದೆ ಮಾನಿನಿ ಮಣಿಯೆ ಕುಸುಮ ಬಾಣಕೆ ।
ನೊಂದಮಾನಿಯೆ ॥ ಪ ॥
ಕಮಲೆ ನಿನ್ನನು ಬಳಲಿಸುತಿಹ ನಿರ್ದಯ ।
ಸುಮಶರನನು ಗೆಲಿಯುವೆನೆ ॥ ೧ ॥
ಚದುರೆ ನಿನ್ನನು ಕಾಡುತಿಹ ಕ್ರೂರಮಾರನ ।
ಹದನಶರವ ದೂರ ಮಾಡುವೆ ॥ ೨ ॥
ಸಖಿಯೆ ನಿನ್ನಯ ಮನತಾಪವ ಬಿಡು ಯಿನ್ನು ।
ಸುಖದಲಿ ಬಹು ರಮಿಸುವೆವೆ ॥ ೩ ॥

ಪ್ರಿಯೇ! ನಿನ್ನ ಇಚ್ಛೆಯೇನಿದೆ ಹೇಳು.

**ಕೋಕಿಲೆ:**—(ಕಮಲೆಯು ನಾಚುವುದನ್ನು ಕಂಡು) ಸಖಿಯೇ! ನಿನ್ನ ಮನೋರಥವ ಪೂರ್ಣಮಾಡುವ ದೇವರೇ ಪ್ರತ್ಯಕ್ಷವಾಗಿ ವರವನ್ನು ಕೊಡಲು ನಿನ್ನೆದುರಿಗೆ ನಿಂತಿರಲು ನೀನು ಈ ರೀತಿ ನಾಚುವುದು ಸರಿಯೇ.

**ಕಮಲೆ:**— ಸಾಕು! ಸಾಕು! ಕೋಕಿಲೇ! ಪುಷ್ಕರಣೆಯಲ್ಲಿರುವ ಕಮಲದ ಕಡೆ ನಡೆ.

**ಕೋಕಿಲೆ:**— ಕಮಲದ ಸೌಂದರ್ಯವನ್ನು ಹಳಿಯುವ ಹಂಸರಾಜರೇ ಇದರಿಗಿರುವಾಗ ಆ ಕಮಲದಲ್ಲಿ ಏನಿದೆ? ವಿಜಯಾ! ನಾವೆಲ್ಲರೂ ಇನ್ನಿಲ್ಲಿರ ಬಾರದು. ಹಂಸಕಮಲಗಳ ಸೌಂದರ್ಯವನ್ನು ಪುಷ್ಕರಣೆಯಲ್ಲಿ ನೋಡುವ ನಡೆ (ಎಂದು ಎಲ್ಲರು ಹೋಗಹತ್ತುವರು.)

**ಕಮಲೆ:**— ಗೆಳತಿಯರೇ! ನನ್ನನ್ನು ಬಿಟ್ಟು ಹೋಗಬೇಡರಿ. ನನಗೆ ಭಯವು ಬರುತ್ತಿದೆ.

**ಕೋಕಿಲೆ:**-- ರಾಜಹಂಸನು ಪಕ್ಕದಲ್ಲಿರುವಾಗ ಭಯಕ್ಕೆ ಕಾರಣವಿಲ್ಲ. (ಎಂದು ಎಲ್ಲರನ್ನು ಕರೆದುಕೊಂಡು ಹೋಗುವಳು.)

**ಹಂಸರಾಜ:**— ಪ್ರಿಯೇ! ಅವರು ಹೋದರೇನಾಯಿತು? ನೀನು ನನ್ನೊಡನೆ ಮಾತನಾಡು. ಹೀಗೆ ದೂರ ಸರಿದು ನಿಲ್ಲಬೇಡ. ನಾನು ನಿನ್ನ ವಿನಂತಿಯ ಮೇರೆಗೆ ಜಾಗ್ರತೆಯಾಗಿ ಇಲ್ಲಿಗೆ ಬರಲಿಲ್ಲವೆಂದು ನನ್ನ ಮೇಲೆ ಸಿಟ್ಟಿಗೆದ್ದಿರುವಿಯೇನು? ನಾನು ನಿನ್ನ ಸವಿನುಡಿಗಳನ್ನು ಕೇಳಲು ಬಹು ಆತುರನಾಗಿರುವೆನು. ಮಾತನಾಡು.

ರಾಗ:— ಮಾಲಕಂಸ ಆದಿತಾಳ.

**೪೭ ಪದ.** ಧಾಟಿ:— (त्यागवारे मोह सुलभा मना)

ಬ್ಯಾಡೆಜಾಣೇ ಮನವಮೋಹಿಸುತ ನೀ ಸದಾ ।
ಕಾಡಲಿಬೇಡೆ ಮನತಾಪವತಾಳೆನಾ ॥ ಪ ॥
ಮರುಳ ಮಾಡುತ । ಕೊರಳ ಕೊಯ್ವುವೇನೆದಯ ದೋರೆ
ನೀ ನಾರಿಮಣಿ । ಮರಗುತಿಹುದೆ ಮನವು ತಾ ॥ ೧ ॥

**ಕಮಲೆ:**—(ಆಶ್ಚರ್ಯದಿಂದ) ಇದೇನು!! ಈ ರೀತಿ ನನ್ನನ್ನು ಹಳಿಯ ಬೇಡಿರಿ. ನಾನು ನಿಮ್ಮ ಚರಣದಾಸಿಯು.

ರಾಗ:—ಬಾಗೆಶ್ರೀ.

**೪೮ ಪದ.** (सेव्य संसार हा स्वजनमति)

ಸೂರ್ಯಕುಲದೀಪನೇ ಕ್ಷಮಿಸುವುದು ಸುಂದರಾ |
ಆರ್ಯಳ ಪರಾಧನೀ ಮರೆತು ಮನಮೋಹನಾ || ಪ ||
ತೋರುದಯುವನೀ | ಕ್ರೂರತಾ ಬಳಲಿಸುವ
ಶರಣಾಗತ ಪ್ರಿಯೆಯನು | ತೊರೆವರೇನೋಪ್ರಿಯಾ || ೧ ||

ನಾನು ನಿಮ್ಮನ್ನೇ ವರಿಸಿದ ದಾಸಿಯು. ನಾನೇ ನಿಮಗೆ ಬೇಡಾಗಿದ್ದರೆ, ನೀವು ನನ್ನ ಮುಖವನ್ನು ಸಹ ನೋಡಬೇಡರಿ. (ಎಂದು ವಸ್ತ್ರದಿಂದ ಮುಖವನ್ನು ಮುಚ್ಚಿಕೊಳ್ಳುವಳು.)

**ಹಂಸರಾಜ:**—(ತನ್ನೊಳಗೆ) ಅಹಾಹಾ!! ಇವಳ ವಿಚಾರಗಳು ಬಹು ಸ್ತುತ್ಯವಾಗಿವೆ. ಇಂಥ ಕ್ಷತ್ರಿಯ ಕುಮಾರಿಯು ನಮ್ಮ ಬಹು ಪವಿತ್ರವಾದ ಭರತಖಂಡದ ಮೇಲಿರುವುದರಿಂದಲೇ ಸೂರ್ಯಚಂದ್ರರು ಉದಯಿಸುವರು ಮತ್ತು ಮುಳುಗುವರು. ಮೇಲಾಗಿ ಇಂಥ ಕ್ಷತ್ರಿಯ ಕನ್ಯಕೆಯರ ಜನ್ಮವು ನಮ್ಮ ರಜಪುತಾನದಲ್ಲಿ ಆದ್ದರಿಂದಲೇ ನಮ್ಮ ಇತಿಹಾಸವು ಎಲ್ಲ ರಾಷ್ಟ್ರಗಳಲ್ಲಿಯ ವೀರರ ಮನಸ್ಸನ್ನು ತನ್ನ ಕಡೆಗೆ ಎಳೆದುಕೊಳ್ಳುವುದು. ಎಲೈ ರಜಪುತಾನವೇ! ಧನ್ಯ, ಧನ್ಯ; ನಿನ್ನ ಪುಣ್ಯಕ್ಕೆ ಸರಿಯಿಲ್ಲ. ನಾವು ಸತ್ತುಹೋದರೂ ಸೂರ್ಯ ಚಂದ್ರರಿರುವ ವರೆಗೆ ನಿನ್ನ ಕೀರ್ತಿಯು ಸ್ಥಿರವಾಗಿರುವುದು. (ಕಮಲೆಯ ಕಡೆಗೆ ನೋಡುತ್ತ) ಇವಳಂತಹ ವೀರಳು ಎಲ್ಲಿಯೂ ಇಲ್ಲ. ಎಂಥ ಹೇಡಿಯಾದರೂ ಸಹ ಈ ಸುಂದರಿಯ ಮುಖದ ಮೇಲೆ ಉಕ್ಕುತ್ತಿರುವ ಶೌರ್ಯದಕಳೆಯನ್ನು ನೋಡಿ, ಇಲ್ಲವೆ ಇವಳ ಶೌರ್ಯದ ವರ್ಣನೆಯನ್ನು ಕೇಳಿ ಯುದ್ಧಕ್ಕೆ ಸಿದ್ಧನಾಗಿ ನಿಲ್ಲು ವನು. ಹಾಯ್! ಹಾಯ್! ನಾನು ಈ ಕೋಮಲಾಂಗಿಯ ಕಷ್ಟವನ್ನು ಪರಿಹರಿಸಲು ಸಾವಕಾಶಮಾಡಿ ಇವಳ ಕೋಮಲವಾದ ಮನಸ್ಸನ್ನು ಎಷ್ಟು ನೋಯಿಸಿದೆನಲ್ಲ. (ಪ್ರಕಟವಾಗಿ) ಪ್ರಿಯೇ! ನಿನ್ನ ಮುಖಕಮಲವನ್ನು ನನಗೆ ತೋರಿಸೇ, ಕೋಪವೇಕೆ? ನಿನಗೆ ವಿನೋದವು ಸಹ ತಿಳಿಯದಾಯಿತೇ?

ರಾಗ:— ಭೀಮ ಫಲಾಸ.

**೪೯ ಪದ.** ಧಾಟಿ:—(**प्रेम सेवा शरण सहज जिंकीमला**)

ಬಾರೆ ನಾನಾ ತರದಿ ನಲಿವ ಕಾಂತಾಮಣಿಯೆ |
ತೋರೆ ಆನನವೆನಗೆ ನೀನೆ ಬಾ ಮೋಹಿನಿಯೆ || ಪ ||
ಇನಿದಾದ ಮುಖದಂದ ನೋಡೇ ಸದಾಘಂದ |
ಜಾಣೆ ಈ ಮನಕಂದ ಮುನಿವರೇನೇ ಪ್ರಿಯೆ || ೧ ||

**ಕಮಲೆ:**—(ಮುಖದ ಮೇಲಿನ ಆಚ್ಛಾದನೆಯನ್ನು ತೆಗೆದು) ಪ್ರಾಣ ಕಾಂತಾ! ದಾಸಿಗೇಕೆ ಇಷ್ಟು ಆದರವು!! ನಾನು ತಮ್ಮ ಚರಣದಾಸಿಯಲ್ಲವೇ? (ಎಂದು ಹಂಸರಾಜನಿಗೆ ನಮಸ್ಕಾರ ಮಾಡುವಳು.)

**ಹಂಸರಾಜ:**—ಹೀಗೇಕೆ ಮಾಡುವೆ? ಏಳು. ನಿನ್ನ ಮನಸ್ಸಿನ ಇಚ್ಛೆಯಾದರೂ ಏನಿರುವುದು?

**ಕಮಲೆ:**— ಈ ಮಾಲೆಯನ್ನು ತಮ್ಮ ಕೊರಳಲ್ಲಿ ಹಾಕಬೇಕೆಂದು.

**ಹಂಸರಾಜ:**—(ಮುಗುಳು ನಗೆ ನಗುತ್ತ) ಹಾಗೇ ಆಗಲಿ. ನಿನ್ನಂತಹ ಗುಣವಂತಿಯು ಮಾಡುವ ಆದರವನ್ನು ಯಾವ ಪುರುಷನು ಸ್ವೀಕಾರಮಾಡಲಾರನು?

**ಕಮಲೆ:**—(ತನ್ನೊಳಗೆ) ಈಗ ನಾನು ಧನ್ಯಳಾದೆನು. (ಎಂದು ಮುಗುಳು ನಗೆ ನಗುತ್ತ ಬಂದು ಹಂಸರಾಜನ ಕೊರಳಿಗೆ ಮಾಲೆಯನ್ನು ಹಾಕುತ್ತಿರುವಷ್ಟರಲ್ಲಿ ಕುಮತಿರಾಜನು ಚಂದ್ರಶೇಖರ ಮತ್ತು ಕೆಲವು ಸರದಾರರನ್ನು ತನ್ನ ಸಂಗಡ ಕರೆದುಕೊಂಡು ಬರುವನು. ಕಮಲೆಯು ಹಿಂದಕ್ಕೆ ಸರಿಯುವಳು.)

**ಕುಮತಿ:**—ನೀಚನೇ! ದರಿದ್ರನೇ! ಹಂಸನೇ! ನಿಲ್ಲು. ನಿಲ್ಲು. ನನ್ನ ರತ್ನವನ್ನು ಹರಣಮಾಡುವುದಕ್ಕೆ ನಿನಗೆ ನಾಚಿಕೆಯು ಬರುವುದಿಲ್ಲವೇ? (ಕಮಲೆಗೆ) ಕಮಲೇ! ನಿನಗೆ ಬುದ್ಧಿ ಎಲ್ಲಿ ಹೋಯಿತು. ತಂದೆಯನ್ನು ವಂಚಿಸಿ ಈ ನೀಚನನ್ನು ಕೂಡಿದೆಯಾ? ನಿನಗೆ ಯಾರೋ ಮದ್ದುಹಾಕಿರಬೇಕು. ನಿನಗೂ ತಕ್ಕ ಶಿಕ್ಷೆಯನ್ನು ಮಾಡುವೆನು. ಚಂದ್ರಶೇಖರಾ! ಸರದಾರರೇ! ಸುಮ್ಮನೇ ಏಕೆ ನಿಂತಿರಿ. ನಾವೆಲ್ಲರು ಕೂಡಿ ಹಂಸರಾಜನ ಮೇಲೆ ಶಸ್ತ್ರಗಳನ್ನೆತ್ತಿ ಸಾಗಿ ಹೋಗೋಣ. ಈ ಅಧಮನ ಗರ್ವವಾದರು ತಗ್ಗಲಿ.

**ಹಂಸರಾಜ:**— ಹೇಡಿಯೇ! ನಾನು ಒಬ್ಬನಾದರೂ ನಿಮ್ಮೆಲ್ಲರಿಗೂ ಹೆದರುವವನಲ್ಲ. ಎಲ್ಲರೂ ಏಕಕಾಲಕ್ಕೆ ಬನ್ನಿ. (ಎನ್ನಲು, ಎಲ್ಲರು ಹಂಸ ರಾಜನ ಮೇಲೆ ಏರಿಹೋಗುವರು. ಕೆಲವು ವೇಳೆಯ ನಂತರ)

**ಕಮಲೆ:**— ನಾನು ಇಂಥ ವೇಳೆಯಲ್ಲಿ ಸಮರವನ್ನು ನೋಡುತ್ತ ನಿಂತರೆ ಹೇಗೆ? ನಾನೂ ನನ್ನ ಪ್ರಾಣಪ್ರಿಯನಿಗೆ ಸಹಾಯವಾಗುವೆನು. (ಎಂದು ಕುಮತಿಯ ಕೈಯಲ್ಲಿಯ ಖಡ್ಗವನ್ನು ಕಸಗೊಂಡು ತನ್ನ ಗಂಡನೊಡನೆ ಬಹು ಉತ್ಸಾಹದಿಂದ ಕಾದಾಡಲು ಪ್ರಾರಂಭಿಸುವಳು.)

**ಕುಮತಿ:**— (ನಡಗುತ್ತ) ಅಯ್ಯೋ! ಅಯ್ಯೋ! ನನ್ನ ಖಡ್ಗವು ಹೋ ಯಿತು. ಚಂದ್ರಶೇಖರಾ! ಸರದಾರರೇ! ಇವಳ ಕೈಯಲ್ಲಿಯ ಖಡ್ಗವನ್ನು ಕಸದುಕೊಳ್ಳುವಷ್ಟು ಶಕ್ತಿಯು ಸಹ ನನ್ನಲ್ಲಿ ಇಲ್ಲ. ಸರದಾರರೇ! ಬೇಗ ಬನ್ನಿರಿ. ನನ್ನನ್ನು ಬದುಕಿಸಿಕೊಳ್ಳಿರಿ. (ಅವರು ಯುದ್ಧದಲ್ಲಿ ತೊಡಗಿದ್ದನ್ನು ನೋಡಿ) ಬರುವುದಿಲ್ಲವೇ. ಇನ್ನು ನಾನು ಇಲ್ಲಿ ನಿಲ್ಲಲಾರೆನು. ಕಮಲೆಯೂ ನನಗೆ ಬೇಡ, (ಎಂದು ಹಿಂದೆ ಒಮ್ಮೆ ಮುಂದೆ ಒಮ್ಮೆ ನೋಡುತ್ತ,) ಚಂದ್ರ ಶೇಖರಾ! ನೀನೂ ಬಾ, ಆ ಅಧಮನು ಕಮಲೆಯನ್ನು ಹರಣಮಾಡಿಕೊಂಡು ಹೋಗಲಿ. (ಎಂದು ಓಡಿಹೋಗುವನು. ಸರದಾರರು ಹಂಸರಾಜನ ಮತ್ತು ಕಮಲೆಯ ಶಸ್ತ್ರಗಳ ಹೊಡತಗಳನ್ನು ತಾಳಲಾರದೆ ಓಡಿಹೋಗುವರು. ಚಂದ್ರಶೇಖರನು ಮಾತ್ರ ಕೆಲವು ವೇಳೆಯ ವರೆಗೆ ಯುದ್ಧಮಾಡಿ ದಣಿದು ಕೆಳಗೆ ಬೀಳುವನು. ಹಂಸರಾಜನು ಅವನ ಎದೆಯ ಮೇಲೆ ಕುಳಿತು)

**ಹಂಸರಾಜ:**— ದುಷ್ಟಾ! ಮದಾಂಧಾ! ಈಗಾದರೂ ನಿನಗೆ ನನ್ನ ಬಾಹುಶಕ್ತಿಯು ತಿಳಿಯಿತೇ? ಈಗ ನನ್ನ ಕೈಯಲ್ಲಿ ಸಿಕ್ಕ ನಿನ್ನನ್ನು ಯಾರು ಬದುಕಿಸಿಕೊಳ್ಳುವರೋ ನೋಡುವ. (ಎಂದು ಖಡ್ಗವನ್ನೆತ್ತಿ ಹೊಡೆಯುವುದ ರಲ್ಲಿ ಕಮಲೆಯು ಧಾವಿಸುತ್ತ ಬಂದು ಖಡ್ಗವನ್ನು ಹಿಡಿದು.)

**ಕಮಲೆ:**— ಪ್ರಾಣಪ್ರಿಯಾ! ಏಳಿರಿ. ನನ್ನ ತಾತನಿಗೆ ಜೀವದಾನವನ್ನು ಕೊಡಿರಿ. (ಎಂದು ಎನ್ನಲು ಹಂಸರಾಜನು ಏಳುವನು. ನಂತರ ವಿನಯದಿಂದ ಕೈಮುಗಿದು ನಿಂತು)

ರಾಗ:—ಭೈರವಿ.

**೫೦ ಪದ.** ಧಾಟಿ:—(**धन्य जाहला माझाराम**)

ಧನ್ಯಳಾದೆನಾ ನಾಥಾ ಕ್ಷಮಿಸು ಮೋಹನಾ || ಪ ||
ಮುನಿಯದೆ ಪ್ರೀಯಾ ದಯುವನೆ ತೋರುತಾ |
ಮನ್ನಿಸು ತಾತನ ಕಾಂತಾ ನಮಿಪೆ ಸುಜಾತಾ || ೧ ||

ಇಷ್ಟೇ ಈ ತಮ್ಮ ಚರಣದಾಸಿಯ ವಿನಂತಿಯು. ಮರ್ಯಾದೆಯನ್ನು ಮೀರಿದ್ದಕ್ಕೆ ಕ್ಷಮಿಸರಿ.

**ಹಂಸರಾಜ:**—(ಆತ್ಮಗತಂ) ಅಹಾಹಾ!! ಏನು ಇವಳ ಉದಾರ ಗುಣವು. ತನ್ನನ್ನು ಬಹು ಪರಿಯಾಗಿ ಹಳಿದ ತಂದೆಯು ಮೇಲೆ ಸಹ ಇವಳ ಪ್ರೇಮವು ಎಷ್ಟು ಅದೆಯಲ್ಲ! (ಸ್ವಲ್ಪ ವಿಚಾರಿಸಿ) ಹಾ!! ತಿಳಿಯಿತು. ಇವಳು ಗುಣಿಯು. ಅಪಕಾರವನ್ನು ಮಾಡಿದವರಿಗೂ ಸಹ ಉಪಕಾರವನ್ನು ಮಾಡುವುದು ಗುಣಿಯ ಲಕ್ಷಣವು. ಈ ವೀರ ಕನ್ಯಕೆಯ ಶೌರ್ಯವು, ನನ್ನ ಧೈರ್ಯವನ್ನು ಇಮ್ಮಡಿಯಾಗಿ ಬೆಳಸಿದಂತೆ, ಈಗ ಇವಳ ಸವಿನುಡಿಯು ನನ್ನ ಕಠಿನವಾದ ಹೃದಯುವನ್ನು ಸಹ ಕರಗಿಸಹತ್ತಿದೆ. ಒಳ್ಳೇದು, ಇವಳ ಸವಿನುಡಿಗೆ ಮರುಳಾಗಿ ಕೈಯಲ್ಲಿ ಸಿಕ್ಕಿದ ವೈರಿಯನ್ನು ಹಾಗೆ ಹೋಗಗೊಡುವುದು ಹೇಗೆ? ಇವಳ ಮನಸ್ಸನ್ನಾದರೂ ನೋಯಿಸುವುದು ಹೇಗೆ? (ಕಮಲೆಯ ಮುಖವನ್ನು ನೋಡಿ) ಏನೇ ಇರಲಿ, ನಾನು ಇವಳ ಮನಸ್ಸನ್ನು ನೋಯಿಸಲಾರೆನು. (ಎಂದು ಪ್ರಕಟವಾಗಿ) ಪ್ರಾಣಪ್ರಿಯೇ! ಹೆದರಬೇಡ. ನಾನು ನಿಃಶಸ್ತ್ರನಾದ ನಿನ್ನ ತಂದೆಯನ್ನು ಎಂದಿಗೂ ಕೊಲ್ಲಲಾರೆನು. (ಚಂದ್ರಶೇಖರನನ್ನು ಕುರಿತು) ಪ್ರಭುಗಳೇ! ತಮ್ಮ ದುಃಖಕ್ಕೆ ಕಾರಣನಾದ ಈ ಬಾಲಕನ ಅಪರಾಧವನ್ನು ಉಡಿಯಲ್ಲಿ ಹಾಕಿಕೊಳ್ಳಿರಿ. ನನ್ನನ್ನು ಕ್ಷಮಿಸರಿ. (ಎಂದು ಚಂದ್ರಶೇಖರನ ಪಾದಕ್ಕೆರಗುವನು.)

**ಚಂದ್ರಶೇಖರ:**—ಏಳು. ಏಳು. (ಹಂಸರಾಜನು ಎದ್ದಮೇಲೆ) ನಾನೇ ಅಪರಾಧಿಯು; ನೀನೇ ನನ್ನನ್ನು ಕ್ಷಮಿಸಬೇಕು. ನನ್ನ ದುಃಖಕ್ಕೆ ನೀನು ಕಾರಣನಲ್ಲ, ಹಾಗೂ ನೀನು ನನ್ನನ್ನು ಕಾಡಿಲ್ಲ. ದುಷ್ಟನಾದ ನಾನೇ ಗುಣಿ

ಯಾದ ನಿನ್ನನ್ನು ಕಾಡಿ ಈ ಶಿಕ್ಷೆಗೆ ಪಾತ್ರನಾದೆನು. ಹಂಸರಾಜನೇ! ಏನು ಹೇಳಲಿ. ರಾಜನಾದ ನಾನು ಗುಣಾವಗುಣಗಳ ಪರೀಕ್ಷೆಯನ್ನು ಮಾಡದೆ, ಆ ದುಷ್ಟನ ಧನಕ್ಕೆ ಮರುಳಾಗಿ ನನ್ನ ಕುಲವನ್ನು ಉದ್ಧಾರಮಾಡುವ ಈ ಕಮಲೆಯನ್ನು ಆ ಕಪಿಗೆ ಕೊಡಲು ಸಿದ್ಧನಾದ್ದರಿಂದಲೇ ನ್ಯಾಯಿಯಾದ ದೇವರು ನನಗೆ ಯೋಗ್ಯವಾದ ಶಿಕ್ಷೆಯನ್ನು ಆತನಿಂದಲೇ ಕೊಡಸಿದನು. ಇಲ್ಲದಿದ್ದರೆ ನನಗೆ ಜ್ಞಾನವೇ ಬರುತ್ತಿದ್ದಿಲ್ಲ. ಹಾಗೂ ನಾನು ನರಪಶುವಿನಂತೆ ಈ ಜಗತ್ತಿನ ಮೇಲೆ ಅಡ್ಡಾಡುತ್ತಿದ್ದೆನು. ಮೇಲಾಗಿ ನಾನು ರಾಜನಿಷ್ಠಾದೇವಿಯ ಪ್ರಿಯ ಭಕ್ತಳಾದ ಈ ಸಾಧ್ವೀ ಶಿರೋಮಣಿಯನ್ನು ಬಹು ಪರಿಪರಿಯಿಂದ ಕಾಡಿದೆನು. ಈ ನನ್ನ ನಿಂದಾಸ್ಪದವಾದ ಕೃತ್ಯಕ್ಕೆ ಧಿಃಕಾರ ವಿರಲಿ. ಧಿಃಕಾರ, ಹಾಯ್! ಹಾಯ್! (ಎಂದು ಉಸುರುಗರೆದು) ದೇವರೇ! ಇನ್ನು ಮೇಲೆ ಮಾತ್ರ ನನ್ನನ್ನು ಜೀವದಿಂದ ಇರಿಸಬೇಡ. ಇನ್ನೂ ಈ ಮೂರ್ಖನಿಂದ ಯಾವ ಕೆಟ್ಟ ಕೆಲಸಗಳು ಆಗುವವೋ ತಿಳಿಯದು. (ಇಷ್ಟರಲ್ಲಿ ವೀರಸೇನನು ಕುಮತಿಯನ್ನು ನೂಕಿಸುತ್ತ ಬರುವನು. ಅವನ ಹಿಂದೆ ವಿಜಯ, ಕೋಕಿಲೆ ಮತ್ತು ಚಿತ್ರರೇಖೆಯು ಬರುವರು.)

**ವೀರಸೇನ:—** ಮುರ್ಖಾ! ಹಂಸರಾಜರಿಗೆ ಶರಗೊಡ್ಡಿ ಬೇಡು. ಎಂದರೆ ನಿನ್ನ ಪ್ರಾಣವು ಉಳಿಯುವುದು. ಮುಖವನ್ನು ಮುಚ್ಚಿಕೊಳ್ಳಬೇಡ. ಈಗ ನಿನ್ನ ಕುಟಿಲವೆಲ್ಲ ಗೊತ್ತಾಯಿತು. (ಹಂಸರಾಜನೆದುರಿಗೆ ತಂದು ನಿಲ್ಲಿಸಿ) ಮಿತ್ರಾ! ನಿನ್ನ ಕಾರ್ಯಕ್ಕೆ ವಿಘ್ನಮಾಡಲು ಬಂದ ಈ ಹೇಡಿಗೆ ಯಾವ ಶಿಕ್ಷೆಯನ್ನು ಮಾಡಲಿ. ಹಂಸಾ! ಈ ಮೂರ್ಖನ ಬೆಂಬಲವಾಗಿ ಬಂದ ಸರದಾರರೆಲ್ಲರು ನಿನ್ನ ಬಾಹುಸಾಮರ್ಥ್ಯಕ್ಕೆ ಹೆದರಿ ಓಡಿಹೋದರೆಂಬಂತೆ ಕಾಣುವುದು.

**ಹಂಸರಾಜ:—** ಚಂದ್ರಶೇಖರ ಮಹಾರಾಜರೇ! ಇವನಿಗೆ ಯಾವ ಶಿಕ್ಷೆಯನ್ನು ವಿಧಿಸಬೇಕು?

**ಚಂದ್ರಶೇಖರ:—** ಈ ನೀಚನು ನನ್ನ ಕಣ್ಣೆದುರಿಗೆ ಬೇಡ. ಈ ಅಧಮನನ್ನು ಶೂಲಕ್ಕೇರಿಸಿರಿ.

**ಕುಮತಿ:**—(ಕೈಮುಗಿದು ವಿನಯದಿಂದ) ಮಿತ್ರಾ! ಇನ್ನು ಮೇಲೆ ನಾನು ಇಂಥ ನೀಚಕೃತ್ಯಗಳನ್ನು ಮಾಡುವುದಿಲ್ಲ. ಈ ಸಾರೆ ನನ್ನ ಅಪರಾಧವನ್ನು ಕ್ಷಮಿಸು. (ಎಂದು ಚಂದ್ರಶೇಖರನ ಚರಣಕ್ಕೆರಗುವನು.)

**ಚಂದ್ರಶೇಖರ:**—(ಅವನನ್ನು ನೂಕಿ) ಮೂರ್ಖಾ! ನನ್ನನ್ನು ಮುಟ್ಟಬೇಡ. ಇನ್ನು ಮೇಲೆ ನಾನು ನಿನ್ನ ಸ್ಪರ್ಶವನ್ನು ಸಹ ಮಾಡುವುದಿಲ್ಲ. ನೀನು ನಿನ್ನನ್ನು ನಂಬಿದ ಮಿತ್ರನ ಜೀವದ ಪರವೇ ಮಾಡದೆ ಓಡಿಹೋಗಿ, ಪುನಃ ನನಗೆ ಮಿತ್ರನೆಂದು ಕರೆದು ನನ್ನ ಸಂತಾಪವನ್ನು ಹೆಚ್ಚಿಸಲು ನಿನಗೆ ಸ್ವಲ್ಪ ಸಹ ನಾಚಿಕೆಯು ಬರುವುದಿಲ್ಲವೇ? ಅಧಮಾ! ಇಲ್ಲಿ ನಿಲ್ಲಬೇಡ. ಹೊರಟುಹೋಗು. ಇನ್ನು ನಾನು ನಿನ್ನ ಬಣ್ಣದ ಮಾತುಗಳಿಗೆ ಮರುಳಾಗುವುದಿಲ್ಲ.

**ಹಂಸರಾಜ:**—(ಕುಮತಿಯ ಕೈಹಿಡಿದು ಅವನನ್ನು ಎಬ್ಬಿಸಿದ್ದಲ್ಲದೆ ಚಂದ್ರಶೇಖರನಿಗೆ) ಪ್ರಭುಗಳೇ! ಶರಣಾಗತರ ಅಪರಾಧವನ್ನು ಕ್ಷಮಿಸಿ, ಅವರನ್ನು ಕಾಪಾಡುವುದು ಕ್ಷತ್ರಿಯರ ಶೀಲವಾಗಿದೆ. ಈ ಹೇಡಿಯಿಂದ ನಮಗೇನು ಅಪಾಯ ಸಂಭವಿಸುವುದು? ಇವನಿಗೆ ಜೀವದಾನವನ್ನು ಕೊಟ್ಟು ನಿಮ್ಮ ಪದರಿಗೆ ಪುಣ್ಯವನ್ನು ಕಟ್ಟಿಕೊಳ್ಳಿರಿ.

**ಚಂದ್ರಶೇಖರ:**—ನಿನ್ನ ಇಷ್ಟವಿದ್ದಂತೆಯಾಗಲಿ. ಕುಮತಿಯೇ! ಇಲ್ಲಿಂದ ಹೊರಟುಹೋಗು. (ಎಂದು ಕುಮತಿಯನ್ನು ದೂಡುವನು.)

**ಕುಮತಿ:**—(ಆತ್ಮಗತಂ) ದೇವರೇ! ನೀನು ಜಾಣನು, ನಿನ್ನ ಅಳವು ಯಾರಿಗೂ ತಿಳಿಯದು. ನೀನು ನನ್ನನ್ನು ಈ ಸಂಕಟದಲ್ಲಿ ದೂಡಿ, ನನ್ನ ಮಾನವನ್ನು ಕಳೆಯದಿದ್ದರೆ ಈ ಜಗತ್ತಿಗೆ ರಕ್ಷಕರೇ ಇಲ್ಲವೆಂದು ನನಗೆ ಎನಿಸುತ್ತಿತ್ತು. ನೀನು ನ್ಯಾಯಿಯಾಗಿದ್ದುದರಿಂದಲೇ ದುಷ್ಟರ ಹಾವಳಿಯು ಕಡಮೆಯಾಗಿದೆ. ದೇವಾ! ನೀನು ತಾಯಿಯ ಗರ್ಭದಲ್ಲಿದ್ದಾಗಲೇ ನನ್ನನ್ನು ಕೊಂದಿದ್ದರೆ, ಇಲ್ಲವೆ ಭೂಮಿಯ ಮೇಲೆ ಬಿದ್ದಕೂಡಲೆ ನಾನು ಸತ್ತುಹೋಗಿದ್ದರೆ, ನನ್ನಿಂದ ಗುಣಿಗಳಿಗೆ ತಾಪವಾಗುತ್ತಿದ್ದಿಲ್ಲ. ಹೇ, ಪ್ರಭೋ! ದೀನದಯಾಳಾ! ಇನ್ನುಮೇಲಾದರೂ ನೀನು ನನ್ನಂತಹ ರಾಜಪಶುವನ್ನು ಈ ಜಗತ್ತಿನ ಮೇಲೆ ಹುಟ್ಟಿಸಬೇಡ. ಇದೇ ನಿನಗೆ ನನ್ನ ಸವಿನಯಪ್ರಾರ್ಥನೆಯು. (ಪ್ರ

ಕಟವಾಗಿ) ಮಿತ್ರಾ! ಹೀಗೆ ನನ್ನನ್ನು ದೂಡಬೇಡ. ಈಗ ನಾನು ಮೊದಲಿನ ಕುಮತಿಯಲ್ಲ. ಗುಣಿಯಾದ ಹಂಸರಾಜನ ಸ್ಪರ್ಶದಿಂದ ನನ್ನ ಆತ್ಮವು ಶುದ್ಧವಾಗಿದೆ. ಆಹಾಹಾ!! ಗುಣಿಯ ವರ್ಣನೆಯನ್ನು ಮಾಡುವುದು ಆದಿ ಶೇಷನಿಗೂ ಸಹ ಆಗದು. ಈ ಲೋಕದಲ್ಲಿ ಗುಣಿಯೇ ಈ ಜಗತ್ತಿನಲ್ಲಿ ಪೂಜ್ಯತೆಗೆ ಪಾತ್ರನೂ ರಾಜಸಿಂಹಾಸನವನ್ನೇರಲು ಯೋಗ್ಯನೂ ಆಗಿರುವನು. ಹಂಸರಾಜರೇ! ನಮ್ಮಂಥ ದುಷ್ಟರು ತಮ್ಮಂಥ ಗುಣಿಗಳನ್ನು ಎಷ್ಟು ವಿಧವಾಗಿ ಕಾಡಿದರೂ ಅವರ ಹೃದಯವು ಕರುಣಾರಸವನ್ನೇ ಸುರಿಸುವುದು. ಗುಣಿಗಳೇ ಲೋಕದಲ್ಲಿ ಧನ್ಯರು. ತಮ್ಮ ಕೀರ್ತಿರೂಪ ಚಂದ್ರನ ಪ್ರಕಾಶಕ್ಕೆ ಯಾವ ದುಷ್ಟರಿಂದಲೂ ಹಾನಿಯು ಬಾರದು. (ಚಂದ್ರಶೇಖರನಕಡೆ ತಿರಿಗಿ) ನನ್ನಂತಹ ಅಧಮನಿಗೆ ನರಕವಾಸವೇ ಯೋಗ್ಯವಾದ ಸ್ಥಳವು. ಪಾಪಿಯಾದ ನನಗೆ ರಾಜಸಿಂಹಾಸನವು ಯೋಗ್ಯವಾದ ಸ್ಥಳವಲ್ಲ. ಮಿತ್ರಾ! ನನ್ನ ಅಪ-ರಾಧವನ್ನು ಕ್ಷಮಿಸು. ಇಷ್ಟು ಅಪರಾಧವೇ ಸಾಕು.

**ಚಂದ್ರಶೇಖರ:**— (ಕುಮತಿಗೆ) ಮಿತ್ರಾ! ಬಾ, ಈಗಾದರೂ ನಿನಗೆ ಬುದ್ಧಿಯು ಹುಟ್ಟಿದ್ದು ನೋಡಿ ನನಗೆ ಬಹು ಆನಂದವಾಗಿದೆ. ಬಾ, ನನಗೆ ಆಲಿಂಗನವನ್ನು ಕೊಡು.

**ಕುಮತಿ:**— ನಾನು ತಮ್ಮ ಪಾದಗಳನ್ನು ಒತ್ತುವುದಕ್ಕೆ ಯೋಗ್ಯನೇ ಹೊರತು ಆಲಿಂಗನಕ್ಕೆ ಯೋಗ್ಯನಲ್ಲ. ಮಿತ್ರಾ! ಇತ್ತಕಡೆ ನೋಡು. ಗುಣಿ ಯಾದ ಕಮಲೆಯು ಗುಣನಿಧಿಯಾದ ಹಂಸರಾಜರನ್ನು ಸೇರಿದಳೆಂಬ ಸಂತೋಷ ದಿಂದ ದೇವತೆಗಳು ಆ ದಂಪತಿಗಳ ಮೇಲೆ ಪುಷ್ಪವೃಷ್ಟಿಯನ್ನು ಮಾಡುತ್ತಿರು ವರು.

**ಚಂದ್ರಶೇಖರ:**— ಮಿತ್ರಾ! ಈ ನನ್ನ ಪ್ರಿಯ ಕಮಲೆಯನ್ನು ಹಂಸ ರಾಜನಿಗೆ ಒಪ್ಪಿಸಲ್ಯಾ.

**ಕುಮತಿ:**— ಅಗತ್ಯವಾಗಿ. ಕಮಲಿನಿಯು ಹಂಸನನ್ನು ಬಯಸದೆ ಕಾಗೆಯನ್ನು ಬಯಸುವಳೇ? ಕಮಲೇ! ಬಾ, ನಾಚಬೇಡ. ನನ್ನೆದುರಿಗೆ ನಿನ್ನ ಕೈಯೊಳಗಿನ ಮಾಲೆಯನ್ನು ಗುಣನಿಧಿಯಾದ ಹಂಸರಾಜನ ಕೊರಳಿಗೆ ಹಾಕು.

ನೋಡಿ ಸಂತೋಷ ಪಡುವೆನು. (ಕಮಲೆಯು ಮುಗುಳು ನಗೆ ನಗುತ್ತ ಬಂದು ಹಂಸರಾಜನಿಗೆ ಮಾಲೆಯನ್ನು ಹಾಕುವಳು.)

**ಚಂದ್ರಶೇಖರ:**— ಈಗ ನನ್ನ ಚಿಂತೆಯು ದೂರಾಯಿತು. ಹಂಸ ರಾಜನೇ! ನನಗೆ ಮುಪ್ಪಾಯಿತು. ಈ ರಾಜಮುದ್ರಿಕೆಯನ್ನೂ ಖಡ್ಗವನ್ನೂ ಕಮಲೆಯೊಡನೆ ಸ್ವೀಕರಿಸು. (ಕಮಲೆಯನ್ನು ಕುರಿತು) ಕಮಲೇ! ಬಾ. (ಎಂದು ಅವಳು ಬಂದ ಕೂಡಲೇ ಅವಳ ಕೈಯನ್ನು ಹಂಸರಾಜನ ಹಸ್ತದಲ್ಲಿ ಇರಿಸಿ) ಇವಳು ನಿನ್ನ ಪ್ರಿಯ ಪತ್ನಿಯಾದರೂ ರಾಜ್ಯಲಕ್ಷ್ಮಿಯ ಮೇಲೆ ನಿನ್ನ ಪ್ರೇಮವು ವಿಶೇಷವಾಗಿರಲಿ. ಕಮಲೇ!

**೫೧ ಪದ.**

ಅಕ್ಕ ನಿಜಪ್ರಿಯಂಗೆ ಮನದಂದದೆ ನೀಂಬೆಸಕೆಯ್ವುದಾಗಳಂ ।
ಮಕ್ಕಳ ಮಾಳ್ಕೆಯಿಂದಿರದೆ ನಿನ್ನೊಡವಂದ ಜನಕ್ಕೆ ಸಂತಸಂ ।
ಮೊಕ್ಕಳಮಾಗೆ ಮನ್ನಿಪುದು ಮಾವನಪೆರ್ಮೆಗ ಮತ್ತೆ ಯೊಲ್ಮೆಗಂ ।
ತಕ್ಕನೆಗಳ್ತೆಯಂ ನೆಗಳ್ವುದೀವುದು ಪೆತ್ತೆಮಗಂ ಪ್ರಮೋದಮಂ
॥ ೧ ॥

ನಿಮ್ಮಿಬ್ಬರಿಗೂ ಮಂಗಳವಾಗಲಿ. (ಹಂಸರಾಜನು ಕಮಲೆಯ ಕೈಯನ್ನು ಹಿಡಿದುಕೊಂಡು ಚಂದ್ರಶೇಖರನಿಗೆ ನಮಸ್ಕರಿಸುವನು, ಚಂದ್ರಶೇಖರನು) ಹಂಸಾ! ಚಿರಕಾಲ ಬಾಳು. ಪ್ರಜಾನುರಾಗಿಯಾಗು. ಕಮಲೇ! ಅಷ್ಟಪುತ್ರ ಸೌಭಾಗ್ಯವತಿಯಾಗು. (ಎಂದು ಆಶೀರ್ವದಿಸುವನು.)

**ಹಂಸರಾಜ:**— ಮಹಾರಾಜರೇ! ತಾವು ಇನ್ನೂ ಕೆಲವು ದಿವಸ ರಾಜ್ಯ ವನ್ನು ಆಳುತ್ತಿರಬೇಕು. ನಾನು ಇನ್ನೂ ಚಿಕ್ಕವನು.

**ಚಂದ್ರಶೇಖರ:**— ನಿನ್ನ ಇಷ್ಟವಿದ್ದಂತೆಯಾಗಲಿ. ಹಂಸಾ! ಮತ್ತೊಂ ದನ್ನೇನು ಬೇಡುವೆ.

**ಹಂಸರಾಜ:**— ತಮ್ಮೆಲ್ಲರ ಆಶೀರ್ವಾದದಿಂದಲೂ ದೇವರ ಕೃಪೆಯಿಂದ ಲೂ ನನ್ನ ಮನೋರಥವೆಲ್ಲ ಪೂರ್ಣವಾದವು. ಇನ್ನು ಗುಣಶೋಧನವನ್ನು ಮಾಡುವ ಶ್ರೀ ಪರಮಾತ್ಮನ ಧ್ಯಾನಮಾಡುವುದೊಂದೇ ಸರಿ. ಜಗನ್ನಿಯಾ ಮಕನಾದ ಶ್ರೀ ಪರಮಾತ್ಮನು ಈ ಜಗತ್ತಿಗೆ ಕಲ್ಯಾಣವನ್ನು ಮಾಡಲಿ!!

**ಎಲ್ಲರು:**— ತಥಾಸ್ತು.

**೫೨ ಪದ.** ಧಾಟಿ:—(ಈಶಸ್ತವನ)

ಭೂಕಾಂತಾ ಶ್ರೀಮಂತಾ ।
ಶ್ರೀಕಾಂತಾ ಪ್ರಭೋ ಕೃಪಾವಂತಾ ॥ ಪ ॥
ಕರುಣಾಭರಣಾ ಚಿಂತಾ ಭಯಹರಣಾ ।
ಹರಿರಕ್ಷಿಸುಜಗವಾ । ವೀರಾ ಧೀರಾ ಭವಭಯವಾನೀಗಿ ॥ ೧ ॥

**(ಎಲ್ಲರೂ ಹೋಗುವರು.)**

ನಾಟಕವು ಸಮಾಪ್ತವಾದುದು.

ॐ श्रीराम

## ಸೂಚನೆಯು:—

ಈ ಸಂಗೀತ ಗುಣಶೋಧನ ನಾಟಕವನ್ನು ಹಿಂದುಸ್ಥಾನ ಸರಕಾರದ ೧೮೬೭ನೇ ಇಸವಿಯ ೨೫ನೇ ಆಕ್ಟಿನ ಪ್ರಕಾರ ನೊಂದಾಯಿಸಿದ್ದರಿಂದ ಇದರ ಯಾವತ್ತೂ ಹಕ್ಕುಗಳು ಗ್ರಂಥಕರ್ತನ ಸ್ವಾಧೀನದಲ್ಲಿವೆ. ಈ ನೀತಿ ಪರವಾದ ನಾಟಕದಿಂದ ಯಾವತ್ತೂ ಕನ್ನಡ ನಾಟಕ ಕಂಪನಿಗಳಿಗೆ ವಿಶೇಷ ಲಾಭವಾಗಬೇಕೆಂಬದಾಗಿ ವಿದ್ವಾಂಸರ ಅಭಿಪ್ರಾಯವಿದ್ದುದರಿಂದ ಇದರಲ್ಲಿ ಸುಪ್ರಸಿದ್ಧ ಕನ್ನಡ ಮತ್ತು ಮರಾಠೀ ನಾಟಕಗಳಲ್ಲಿಯ ಉತ್ತಮ ಪದಗಳ ಧಾಟಿಗಳನ್ನು ಹಾಕಿರುತ್ತದೆ. ಇದರಲ್ಲಿಯ ಸೀನರಿಗಳು ಬಹು ಮನೋಹರವಾಗಿವೆ. ಈ ನಾಟಕವನ್ನಾಡಲಿಚ್ಛಿಸುವವರು, ಗ್ರಂಥಕರ್ತನಿಗೆ ನೂರಇಪ್ಪತ್ತೈದು (೧೨೫) ರೂಪಾಯಿ ಕಾಣಿಕೆಕೊಟ್ಟು, ಅವನ ಲೇಖೀಪರ ವಾನಿಗೆಯನ್ನು ಪಡೆದುಕೊಳ್ಳಬೇಕು. ಈ ಪುಸ್ತಕಗಳನ್ನು ಮಾರುವ ಕಂಪನಿ ಯವರಿಗೆ ಒಂದು ನೂರ ರೂಪಾಯಕ್ಕೆ ಇಪ್ಪತ್ತರಂತೆ ಕಮಿಶನ್ ದೊರೆಯು ವುದು. ಇಚ್ಛೆ ಇದ್ದವರು ಕೆಳಗಿನ ವಿಳಾಸದವರಿಗೆ, ಪತ್ರದ್ವಾರಾ ಇಲ್ಲವೆ, ಸಮಕ್ಷಮ ಭೆಟ್ಟಿಯಾಗಿ, ತಮ್ಮ ಅಭಿಪ್ರಾಯವನ್ನು ತಿಳಿಸಬೇಕು.

ಗ್ರಂಥಕರ್ತಾ:—

ವಿಳಾಸ:—

ಅಚ್ಯುತರಾವ ಕೃಷ್ಣರಾವ ಹುಯಿಲಗೋಳ,

ಸಾ॥ ಗದಗ.

